# ಅಕ್ಕಮಹಾದೇವಿ ಮತ್ತು ಮೀರಾಬಾಯಿ



## ...ಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ
ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ

ಸಂಶೋಧಕಿ
ದೇವಕಿ ಪ್ರಸನ್ನ ಜಿ.ಎಸ್.

ಮಾರ್ಗದರ್ಶಕರು
ಪ್ರೊ. ಎ. ವಿ. ನಾವಡ

೨೦೦೮

...ಟಕ ಥಿಯೊಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ, ಮಂಗಳೂರು - ೫೭೫೦೦೧

# ಅಕ್ಕಮಹಾದೇವಿ ಮತ್ತು ಮೀರಾಬಾಯಿ

## ಒಂದು ತೌಲನಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ

ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ನಿಬಂಧ

ಸಂಶೋಧಕಿ

ದೇವಕಿ ಪ್ರಸನ್ನ ಜಿ.ಎಸ್.

ಮಾರ್ಗದರ್ಶಕರು

ಪ್ರೊ. ಎ. ವಿ. ನಾವಡ

೨೦೦೮

ಕರ್ನಾಟಕ ತಿಯೋಲಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು – ೫೭೫೦೦೧

# ಪ್ರಮಾಣಪತ್ರ

ಹಂಪಿ ವಿಶ್ವವಿದ್ಯಾಲಯದ ಎಂಫಿಲ್ ಪದವಿಗಾಗಿ ಸಾದರಪಡಿಸಿದ **ಅಕ್ಕಮಹಾದೇವಿ ಮತ್ತು ಮೀರಾಬಾಯಿ : ಒಂದು ತೌಲನಿಕ ಅಧ್ಯಯನ** ಶೀರ್ಷಿಕೆಯ ಈ ಪ್ರಬಂಧವು ಈ ಸಂಶೋಧಕಿಯ ಸ್ವತಂತ್ರ ಕೃತಿಯಾಗಿದ್ದು ಕ್ಷೇತ್ರಕಾರ್ಯ, ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರದಲ್ಲಿ ಪ್ರೊ. ಎ. ವಿ. ನಾವಡ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

Devakiprasanna G.S.

ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ **ದೇವಕಿ ಪ್ರಸನ್ನ ಜಿ. ಎಸ್.**

ಬಲ್ಮಠ, ಮಂಗಳೂರು – ೫೭೫೦೦೧

ದಿನಾಂಕ: ೩ – ೧೦ – ೦೮

# ಯೋಗ್ಯತಾ ಪತ್ರ

ದೇವಕಿ ಪ್ರಸನ್ನ ಜಿ. ಎಸ್. ಅವರು ನನ್ನ ಸಲಹೆ, ಮಾರ್ಗದರ್ಶನದಲ್ಲಿ **ಅಕ್ಕಮಹಾದೇವಿ ಮತ್ತು ಮೀರಾಬಾಯಿ: ಒಂದು ತೌಲನಿಕ ಅಧ್ಯಯನ** ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಪ್ರಬಂಧವು ಸಂಶೋಧಕರ ಸ್ವಂತ ಕ್ಷೇತ್ರಕಾರ್ಯ, ಅಭಿಪ್ರಾಯ ಸಂಗ್ರಹ, ಸಂದರ್ಶನ, ಬೋಧನೆ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಈ ಪ್ರಬಂಧ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

**ಪ್ರೊ. ಎ. ವಿ. ನಾವಡ**
ಸಂಶೋಧನ ಮಾರ್ಗದರ್ಶಕರು

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನ ಕೇಂದ್ರ
ಬಲ್ಮಠ, ಮಂಗಳೂರು – ೫೭೫೦೦೧

ದಿನಾಂಕ: ೩-೧೦-೨೦೦೮

# ಅಕ್ಕಮಹಾದೇವಿ ಮತ್ತು ಮೀರಾಬಾಯಿ

## ಒಂದು ತೌಲನಿಕ ಅಧ್ಯಯನ



ಅಧ್ಯಯನಗಳ ವಿವರ

ಅಧ್ಯಾಯ ೧

# ಅಧ್ಯಯನದ ತಾತ್ವಿಕ ಹಿನ್ನೆಲೆ ಮತ್ತು ಸ್ವರೂಪ

೧-೧. ಹಿನ್ನೆಲೆ

೧-೨. ಅನುಭಾವದ ಸ್ವರೂಪ

೧-೩. ಅನುಭಾವಿ

೧-೪. ತೌಲನಿಕ ಅಧ್ಯಯನದ ಉದ್ದೇಶ ಮತ್ತು ಸ್ವರೂಪ

೧-೫. ವೈಧಾನಿಕತೆ

# ಅಧ್ಯಾಯ ೧: ಅಧ್ಯಯನದ ತಾತ್ವಿಕ ಹಿನ್ನೆಲೆ ಮತ್ತು ಸ್ವರೂಪ

## ೧-೧. ಹಿನ್ನೆಲೆ:

ಭಾರತದ ಬೇರೆ ಬೇರೆ ಭಾಷೆಗಳಲ್ಲಿ ಬೆಳೆದು ಬಂದ ಸಾಹಿತ್ಯದಲ್ಲಿ ಭಾವಧಾರೆ ಮಾತ್ರ ಒಂದೇ ಆಗಿ ಹರಿಯುತ್ತದೆ. ಇದಕ್ಕೆ ಮುಖ್ಯ ಕಾರಣ ಭಾರತದ ವಿಭಿನ್ನ ಭಾಗಗಳಲ್ಲಿ ಆಗಿ ಹೋದ ಮಹಾಪುರುಷರು, ಅನುಭಾವಿಗಳು ಮತ್ತು ಸಂತರು. ಆ ಮಹಾಮಹಿಮರು ಆಡಿದ ಭಾಷೆ ಭಿನ್ನವಾಗಿರಬಹುದು. ಆದರೆ ಅವರ ಚಿಂತನೆಯ ದಾರಿ ಅವರ ಹಂಬಲ, ಜೀವನದ ಬಗೆಗೆ ಅವರಿಗಿರುವ ದೃಷ್ಟಿ ಧೋರಣೆ ಒಂದೇ ಆಗಿದೆ. ಆದುದರಿಂದಲೇ ಅವರ ಜೀವನ ಮತ್ತು ವಿಚಾರಗಳಲ್ಲಿ ಹೋಲಿಕೆ ಕಾಣಸಿಗುತ್ತದೆ. ಈ ಹೋಲಿಕೆ ವಿಶೇಷವಾಗಿ ಮಧ್ಯಕಾಲೀನ ಹಿಂದೀ ಸಂತ ಕವಿಗಳಲ್ಲಿ ಮತ್ತು ಕನ್ನಡದ ವಚನಕಾರರಲ್ಲಿ ಗುರುತಿಸಬಹುದು. ದೇಶ, ಕಾಲ, ಭಾಷೆ ಬೇರೆ ಬೇರೆಯಾದರೂ ಅಕ್ಕಮಹಾದೇವಿ ಮತ್ತು ಮೀರಾಬಾಯಿ ಇಬ್ಬರು ಅನುಭಾವಿಗಳ ಜೀವನ ಪ್ರವಾಹದ ದಿಕ್ಕು ಒಂದೇ ಆಗಿರುವುದು ಗಮನಾರ್ಹ. ಭಾರತ ದೇಶ, ಭಾರತ ಧರ್ಮ, ಭಾರತೀಯ ಸಂಸ್ಕೃತಿ ಇವು ಇಬ್ಬರಿಗೂ ಒಂದೇ ಆಗಿರುವುದೇನೋ ನಿಜ. ಆದರೂ ಇವರ ಜೀವನ ಮತ್ತು ಕೃತಿಗಳಲ್ಲಿ ಕಂಡುಬರುವ ಸಾಮ್ಯ, ಸಾದೃಶ್ಯಗಳು ವಿಶೇಷವಾದವು. ಕೆಲವು ಸಂದರ್ಭಗಳಲ್ಲಿ ಒಬ್ಬರದು ಇನ್ನೊಬ್ಬರದರ ಪಡಿಯಚ್ಚಿನಂತಿದೆ. ಅಕ್ಕಮಹಾದೇವಿ ತಂದೆ ತಾಯಿಗಳಿಗೆ ಬಹುಕಾಲದ ನಂತರ ಹರಕೆಗಳ ಫಲವಾಗಿ ಹುಟ್ಟಿದ ಏಕಮಾತ್ರ ಪುತ್ರಿಯಾದ್ದರಿಂದ ಅವರ ಪ್ರೀತಿ ವಾತ್ಸಲ್ಯಗಳೆಲ್ಲ ಈಕೆಗೇ ಮೀಸಲಾಗಿತ್ತು. ಮೀರಾಬಾಯಿಯೂ ಸಹ ತಂದೆ ತಾಯಿಗಳಿಗೆ ಒಬ್ಬಳೇ ಮುದ್ದು ಮಗಳು. ತಂದೆ ತಾಯಿಗಳ ಪ್ರೀತಿಯನ್ನು ಸ್ವಲ್ಪಸಮಯವೇ ಆದರೂ ಸೂರೆಗೊಂಡವಳು. ತ್ಯಾಗಮಯಿ ಹಾಗೂ ಮಹಾವಿರಾಗಿಣಿಯರಾದ ಇವರ ಜೀವನದ ಒಂದೊಂದು ಹಂತದಲ್ಲೂ ಎಷ್ಟು ಸಾಮ್ಯವಿದೆ, ಸಾದೃಶ್ಯವಿದೆ ಎಂಬುದನ್ನು ತೌಲನಿಕವಾಗಿ ನೋಡುವುದೇ ಈ ಅಧ್ಯಯನದ ಉದ್ದೇಶ.

ಭಾರತದಲ್ಲಿ ಬೇರೆ-ಬೇರೆ ಧರ್ಮಗಳನ್ನು ಅನುಸರಿಸುವ ಹಲವು ಸಮುದಾಯದ ಜನರಿದ್ದಾರೆ. ಹಲವು ಧರ್ಮಗಳ ಆಚರಣೆ ಭಿನ್ನ-ಭಿನ್ನವಾಗಿದ್ದರೂ ಎಲ್ಲದರ ಸಾರ ಒಂದೇ. ತತ್ವನಿರೂಪಣೆ, ದರ್ಶನ ಪ್ರತಿಪಾದನೆ, ಸಿದ್ಧಾಂತ ಸ್ಥಾಪನೆಗಳಲ್ಲಿ ಅಂತರವಿದ್ದರೂ ಎಲ್ಲ ಧರ್ಮಗಳ ಸಾರವಾದ ಭಗವದ್ಭಕ್ತಿ ನಿರೂಪಣೆಯಲ್ಲಿ ಅಂತಹ ಅಂತರವೇನೂ ಕಾಣಸಿಗುವುದಿಲ್ಲ. ಕಾಲಕಾಲಕ್ಕೆ, ದೇಶದೇಶಕ್ಕೆ ಆಚಾರ ವ್ಯವಹಾರಗಳಲ್ಲಿ ವ್ಯತ್ಯಾಸ ಕಂಡುಬಂದರೂ ಭಕ್ತಿಯಲ್ಲಿ ಆಂತರಿಕ ವ್ಯತ್ಯಾಸವೇನೂ ಇರುವುದಿಲ್ಲ. ಆರಾಧ್ಯ ದೇವರನ್ನು ಒಬ್ಬ ಹರಿಯೆಂದು ಕರೆದರೆ, ಇನ್ನೊಬ್ಬ ಹರನೆಂದು ಕರೆಯಬಹುದು, ಮತ್ತೊಬ್ಬ ಬೇರೊಂದು ಹೆಸರಿನಿಂದ ಕರೆಯಬಹುದು. ಒಬ್ಬ

ತುಳಸಿಯಿಂದ ಪೂಜಿಸಿದರೆ, ಇನ್ನೊಬ್ಬ ಬಿಲ್ವಪತ್ರೆಯಿಂದ ಆರಾಧಿಸಬಹುದು, ಮತ್ತೊಬ್ಬ ಬೇರೆ ರೀತಿಯಿಂದ ಉಪಾಸನೆ ಮಾಡಬಹುದು. ಒಬ್ಬ ಗಂಧವನ್ನು ಧರಿಸಿದರೆ, ಇನ್ನೊಬ್ಬ ವಿಭೂತಿ ಧರಿಸಬಹುದು, ಮತ್ತೊಬ್ಬ ಬೇರೆ ಯಾವುದಾದರೂ ಲಾಂಛನ ಧರಿಸಬಹುದು. ಆದರೆ ಇವೆಲ್ಲಾ ಭಕ್ತಿಯ ಬಾಹ್ಯಾಚರಣೆಗಳು. ಭಕ್ತಿಯ ಸ್ವಾಭಾವಿಕ ಲಕ್ಷಣವಾದ ಆತ್ಮ ಸಮರ್ಪಣೆ ಎಲ್ಲ ಧರ್ಮಗಳಲ್ಲೂ ಒಂದೇ. ಹಾಗಾಗಿ ಭಕ್ತಿಯ ಬಗ್ಗೆ ಹೇಳುವಾಗ ಶೈವ ವೈಷ್ಣವ ಇತ್ಯಾದಿ ವಿಶೇಷಗಳ ಅಗತ್ಯವಿಲ್ಲ. ವಿಶೇಷಣ ಬೇಕೇ ಬೇಕು ಎಂದಾದರೆ ಭಗವದ್ಭಕ್ತಿ ಎನ್ನಬಹುದು ಅಷ್ಟೆ. ನಮಗೆ ಇಲ್ಲಿ ಆಂತರಿಕ ಶುದ್ಧ ಭಕ್ತಿಯೆ ಮುಖ್ಯ ಹೊರತು ಬಾಹ್ಯಾಚರಣೆಗಳು ಅಲ್ಲ.

### ೧-೨ ಅನುಭಾವದ ಸ್ವರೂಪ:

ನಮಗೆ ತಿಳಿಯದ ಯಾವುದೇ ವಸ್ತುವಾಗಲಿ, ವ್ಯಕ್ತಿಯಾಗಲಿ, ಶಕ್ತಿಯಾಗಲಿ – ಅದನ್ನು ಕುರಿತು ನಮ್ಮಲ್ಲಿ ಹಠಾತ್ತನೆ ಭಯದ ಭಾವನೆ ಹುಟ್ಟುತ್ತದೆ. ಅದರ ಪರಿಚಯವಾದಂತೆಲ್ಲ ಭಯ ಹಿಂದೆ ಸರಿದು ಪ್ರೀತಿ ಹುಟ್ಟುತ್ತದೆ. ಈ ರೀತಿ ಅಗೋಚರ ವಿಷಯದಲ್ಲಿ ಮನುಷ್ಯನಿಗಿದ್ದ ಮೊದಲ ಭಯದ ಭಾವನೆ ಪರತತ್ವದ ಅರಿವಾಗುತ್ತ ಬಂದಂತೆ, ಹಿಂದೆ ಸರಿದು ಪ್ರೀತಿಯ ಭಾವನೆ ಹುಟ್ಟ ತೊಡಗುತ್ತದೆ. ಈ ಪ್ರೀತಿಯೇ ಭಕ್ತಿಗೆ ಮೂಲ. ಆರಂಭ ಕಾಲದ ಭಕ್ತಿಯಲ್ಲಿ ಸ್ವಲ್ಪ ಪ್ರಮಾಣದಲ್ಲಿ ಭಯದ ಅಂಶ ಸೇರಿಕೊಂಡಿರಬಹುದಾದರೂ ಪರಿಪಕ್ವಾವಸ್ಥೆಯ ಭಕ್ತಿ ಶುದ್ಧ ಪ್ರೇಮ ಸ್ವರೂಪದ್ದು.

ಭಕ್ತಿಯ ಒಂದು ವಿಶಿಷ್ಟ ಸ್ಥಿತಿಯೆ, ಪರಾಕಾಷ್ಠೆಯ ಅನುಭಾವ ಎನ್ನಬಹುದು. ಅಡಕವಾಗಿ ಹೇಳುವುದಾಧರೆ ಜೀವಾತ್ಮನಿಗೆ ಆಗುವ ಪರಮಾತ್ಮನ ಸಾಕ್ಷಾತ್ಕಾರದ ಪ್ರತ್ಯಕ್ಷ ಅನುಭವವೇ ಅನುಭಾವ. ಅನುಭಾವ ಬೇರೆಯಾವ ರಹಸ್ಯ ತಂತ್ರವಲ್ಲ, ಇಂದ್ರಜಾಲವಲ್ಲ, ಪವಾಡವಲ್ಲ, ಸಿದ್ಧಿ ಸಾಧನೆಯಲ್ಲ. ನಿಜವಾದ ಅನುಭಾವಿ ಅತಿಮಾನುಷ ಶಕ್ತಿಗಳನ್ನು, ಯೋಗ ಸಿದ್ಧಿಗಳನ್ನು ಇಚ್ಛಿಸುವುದಿಲ್ಲ. ಆತನಿಗೆ ಬೇಕಾಗಿರುವುದು ಒಂದೆ – ಪರಮಾತ್ಮ, ಪರಮಾತ್ಮನ ಸಾಕ್ಷಾತ್ಕಾರದ ಪ್ರತ್ಯಕ್ಷ ಅನುಭವ. ಪ್ರತ್ಯಕ್ಷ ಅನುಭವದಿಂದ ಆತನ ಬುದ್ಧಿ ಬಲಿತು, ಭಾವಶುದ್ಧನಾಗಿ ಅನುಭವ ದಿವ್ಯವಾಗುತ್ತದೆ. ಅನುಭಾವಿ ಪರಮಾತ್ಮನನ್ನು ತರ್ಕ-ಅನುಮಾನದಿಂದ ಊಹಿಸಿಕೊಳ್ಳುವುದಿಲ್ಲ; ಅಂತರ್ದೃಷ್ಟಿಯಿಂದ ನೋಡುತ್ತಾನೆ ಈತನಿಗೆ ಅಂಧಾನುಕರಣೆ ಸ್ವಲ್ಪವೂ ಹಿಡಿಸುವುದಿಲ್ಲ. ಈತ ಅಂತರ್ವಾಣಿಗೆ ಮಾತ್ರ ಕಿವಿಗೊಡುತ್ತಾನೆ. ಅನುಭಾವ ತತ್ವ ಮೂಲತಃ ಮೂರು ಸತ್ಯಗಳನ್ನು ಸ್ವಯಂ ಸಿದ್ಧ ನಿತ್ಯ ಸತ್ಯಗಳೆಂದು ಮೊತ್ತಮೊದಲೇ ಒಪ್ಪಿಕೊಂಡು ಬಿಡುತ್ತದೆ. ಸಮಸ್ತ ಕಲ್ಯಾಣ ಗುಣ ಸಂಪನ್ನನಾದ, ಸರ್ವತಂತ್ರ ಸ್ವತಂತ್ರನಾದ, ಅವ್ಯಾಜ ಕರುಣಾಸಿಂಧುವಾದ, ನಿತ್ಯನಾದ ಪರಮಾತ್ಮನೊಬ್ಬನಿದ್ದಾನೆ; ಜೀವಾತ್ಮನೂ ನಿತ್ಯ, ಪರಮಾತ್ಮಾಧೀನ, ಪರಮಾತ್ಮ ಸಮಾಗಮಾಪೇಕ್ಷೆ;

ಜೀವಾತ್ಮ-ಪರಮಾತ್ಮರ ಸಮಾಗಮ ಇಲ್ಲವೆ ಐಕ್ಯ ಸಾಧ್ಯ. ಈ ಮೂರರಲ್ಲಿ ಯಾವುದಾದರೂ ಒಂದನ್ನು ನಿರಾಕರಿಸಿದರೂ ಅನುಭಾವ ತತ್ವ ಸಿದ್ಧಿಸದು. ದೇವನನ್ನೊಪ್ಪದ, ಆತ್ಮವನ್ನೊಪ್ಪದ ಒಂದು ತತ್ವ, ದರ್ಶನ, ಸಿದ್ಧಾಂತ ಇರಲು ಸಾಧ್ಯ. ಆದರೆ ದೇವರಿಲ್ಲದೆ, ಆತ್ಮನಿಲ್ಲದೆ ಅನುಭಾವ ಸಾಧ್ಯವಿಲ್ಲ. ಜೀವಾತ್ಮನಿಗೆ ಪರಮಾತ್ಮನಲ್ಲಿ ಇರುವ ಮಹಾವಿಶ್ವಾಸ, ಅನನ್ಯ ಪ್ರೇಮಗಳೇ ಅನುಭಾವಕ್ಕೆ ಮೂಲಾಧಾರ. ವಿಶ್ವಾಸದ ಪರಾಕಾಷ್ಠೆ ಪ್ರಪತ್ತಿ; ಪ್ರೇಮದ ಪರಾಕಾಷ್ಠೆ ಸತಿಪತಿ ಭಾವ. ಈ ವಿಶ್ವಾಸ ಪ್ರೇಮಗಳು ಬುದ್ಧಿಜನಿತವಲ್ಲ, ಹೃದಯಾಂತರಾಳದ ಸಹಜ ಪ್ರವೃತ್ತಿ.

ಲೌಕಿಕದಲ್ಲಿ ಎರಡುಜೀವಗಳ ಸಮರಸಕ್ಕೆ, ಐಕ್ಯಕ್ಕೆ ಪರಮ ನಿದರ್ಶನವೆಂದರೆ ಮದುವೆ. ಲೌಕಿಕ ದಾಂಪತ್ಯದ ಪರಿಭಾಷೆಯನ್ನೇ ಉಪಯೋಗಿಸಿಕೊಂಡು ಜೀವಾತ್ಮ-ಪರಮಾತ್ಮ ಸಮಾಗಮವನ್ನು ಆಧ್ಯಾತ್ಮಿಕ ವಿವಾಹವೆಂದು ಅನುಭಾವತತ್ವದಲ್ಲಿ ಹೇಳಿದೆ.

ಈ ತತ್ವದ ಒಂದು ಮುಖ್ಯ ನಂಬಿಕೆ-ಜೀವಾತ್ಮ ಪರಮಾತ್ಮನನ್ನು ಹುಡುಕಿ ಒಲಿಸುವಂತೆಯೇ ಅಥವಾ ಅದಕ್ಕೂ ಮಿಗಿಲಾಗಿ ಪರಮಾತ್ಮ ಜೀವಾತ್ಮವನ್ನು ಹುಡುಕುತ್ತದೆ. ಎಲ್ಲಕಾಲದ, ಎಲ್ಲದೇಶದ, ಎಲ್ಲ ಧರ್ಮದ ಅನುಭಾವಿಗಳೂ ಜೀವಾತ್ಮ ಸತಿ, ಪರಮಾತ್ಮ ಪತಿ ಎಂಬ ಭಾವನೆಯನ್ನು ವ್ಯಕ್ತ ಪಡಿಸಿದ್ದಾರೆ. ಈ ಸತಿ-ಪತಿ ಭಾವ ಅನುಭಾವ ತತ್ವದ ವಿಶಿಷ್ಟ ಲಕ್ಷಣ. ಪುರುಷ ಅನುಭಾವಿಗಳೆಲ್ಲರೂ ತಮ್ಮನ್ನು ಸ್ತ್ರೀಯೆಂದು ಭಾವಿಸಿಕೊಂಡು ಸತಿ-ಪತಿ ಭಾವ ತಾಳಿಯೇ ಪರಮಾತ್ಮನ ಸಾಕ್ಷಾತ್ಕಾರ ಪಡೆದಿದ್ದಾರೆ.

ಮಧುರ ಭಾವದ ಭಕ್ತಿಯನ್ನು, ಜೀವಾತ್ಮ-ಪರಮಾತ್ಮರ ಸಂಬಂಧದ ಸತಿ-ಪತಿ ಭಾವವನ್ನು ಸರಿಯಾಗಿ ಅರ್ಥೈಸಿಕೊಳ್ಳಬೇಕು. ಪರಿಭಾಷೆ ಶೃಂಗಾರದ್ದಾದರೂ ಅರ್ಥ ಆಧ್ಯಾತ್ಮಿಕದ್ದು. ಕಾಲಕಾಲದ, ದೇಶ ದೇಶದ ಧರ್ಮಾಚರಣೆಯಲ್ಲಿ, ತತ್ವ ಪ್ರತಿಪಾದನೆಯಲ್ಲಿ, ಸಿದ್ಧಾಂತ ಸ್ಥಾಪನೆಯಲ್ಲಿ ವ್ಯತ್ಯಾಸಗಳು ಇರಬಹುದು; ಆದರೆ ಎಲ್ಲ ಕಾಲದ, ಎಲ್ಲ ದೇಶದ, ಎಲ್ಲ ಧರ್ಮದ ಅನುಭಾವಿಗಳ ಅನುಭವ ಒಂದೇ ರೀತಿಯದ್ದಾಗಿದೆ. ಅನುಭಾವಿ ಯಾವ ಬಾಹ್ಯ ಪದ್ಧತಿಯನ್ನೂ ಮತ ಸಿದ್ಧಾಂತವನ್ನೂ, ತತ್ವ ಸೂತ್ರಗಳನ್ನೂ, ನಿಯಮ ನಿಬಂಧನೆಗಳನ್ನೂ ಸ್ವೀಕರಿಸುವುದಿಲ್ಲ. ಆತನಿಗಿರುವ ಏಕೈಕ ಪ್ರಮಾಣ ಆತ್ಮಸಾಕ್ಷಾತ್ಕಾರ, ಆತ್ಮಾನುಭವ. ಅನುಭಾವಿಯ ಅನುಭವ ತನ್ನದೆ ಸ್ವಂತದ್ದು; ಗ್ರಂಥಗಳನ್ನೋದಿ, ಇತರರನ್ನು ನೋಡಿ ಕಲಿತದ್ದಲ್ಲ.

**೧-೩ ಅನುಭಾವಿ:**

ಅನುಭಾವಿಯ ಪರಮಾತ್ಮನ ಸಾಕ್ಷತ್ಕಾರ ಎಷ್ಟೇ ಸಮಗ್ರವೂ, ಸಂಪೂರ್ಣವೂ ಆದದ್ದಾದರೂ ಮಾತಿನಲ್ಲಿ ಆ ಅನುಭವವನ್ನು ಪೂರ್ತಿಯಾಗಿ ವ್ಯಕ್ತ ಪಡಿಸಲು ಸಾಧ್ಯವಾಗುವುದಿಲ್ಲ. ಅಷ್ಟೇ ಅಲ್ಲ,

ತನ್ನ ಅನುಭವವನ್ನು, ತಾನು ಪಡೆದ ಸಾಕ್ಷಾತ್ಕಾರವನ್ನು ಅನುಭಾವಿ ಬುದ್ಧಿಬಲದಿಂದ, ತರ್ಕದಿಂದ ಪ್ರತಿಪಾದಿಸಲು ಸಾಧ್ಯವಾಗಲಾರದೆ ಇರಬಹುದು; ಆದರೂ ಅವನ ಅನುಭವ, ಸಾಕ್ಷಾತ್ಕಾರ ಆತನಿಗೆ ಪೂರ್ಣ ಸತ್ಯ. ತರ್ಕ ಯುಕ್ತಿ ಪ್ರಮಾಣಗಳಿಂದ ವಾದ ಮಾಡಿ ಪರಮಾತ್ಮನ ಅಸ್ತಿತ್ವವನ್ನು ಸಮರ್ಥಿಸಿ ಪ್ರತಿಪಾದಿಸುವ ಜ್ಞಾನಿಗೆ ಆ ಪರವಸ್ತುವಿನ ಆತ್ಮಾನುಭವ ಇದೆಯೋ ಇಲ್ಲವೋ ಗೊತ್ತಿಲ್ಲ. ಆದರೆ ಹೃದಯಾಂತರಾಳದ ಭಾವ ಪರವಶತೆಯಿಂದ ಪರದೈವವನ್ನು ತಂದೆಯಾಗಿ, ತಾಯಿಯಾಗಿ, ಮಗುವಾಗಿ, ಗಂಡನಾಗಿ, ಪ್ರಿಯತಮನಾಗಿ, ಬಂಧುವಾಗಿ ಅನುಭವಿಸುವ ಅನುಭಾವಿಗೆ ಸಂಪೂರ್ಣ ಪ್ರತ್ಯಕ್ಷಾನುಭವ ಇದೆ. ಅನುಭಾವಿ ತಾನು ಪರಮಾತ್ಮ ಸಾಕ್ಷಾತ್ಕಾರವಾದ ಅನುಭವದ ಸಮಾಧಿಯಲ್ಲಿರುವ ಆತನಿಗೆ ಬೇರೆ ಯಾವ ಪರಿವೆಯೂ ಇರುವುದಿಲ್ಲ. ಅನುಭಾವಿಗಳು ಆವೇಶ ಪರವಶರಾಗಿ ಕೇವಲ ತಮ್ಮ ಸಂತೋಷಕ್ಕಾಗಿ ತಮ್ಮ ಅನುಭವಗಳನ್ನು ಹಾಡಿನ ಮೂಲಕ ತೋಡಿಕೊಂಡಿದ್ದರೂ ಅದರ ಮೂಲಕ ಲೋಕಕಲ್ಯಾಣವೂ ಸಾಧ್ಯವಾಗಿದೆ. ಈ ರೀತಿ ಅನುಭಾವ ಪ್ರಪಂಚದಲ್ಲಿರುವ ಭಕ್ತ–ಭಗವಂತರ ಕಣ್ಣು ಮುಚ್ಚಾಲೆಯಾಟದಿಂದ ಅನುಭಾವ ಸಾಹಿತ್ಯ ಬೆಳೆದು ಮಾನವನ ಆಧ್ಯಾತ್ಮಿಕ ಸಾಧನೆಗೆ ಸಹಾಯಕವಾಗಿದೆ.

ಅನುಭಾವಿಗಳು ಮೂಲತಃ ಧರ್ಮ ಸಾಧಕರು, ಭಗವದ್ಭಕ್ತರು, ಅವರ ಏಕೈಕ ಪರಮ ಧ್ಯೇಯ ಪರಮಾತ್ಮನ ಸಾಕ್ಷಾತ್ಕಾರ. ಅವರು ಕವಿಗಳಾಗಿ ಹಾಡು ಹಾಡಿದ್ದರೆ ಅದು ಗೌಣ. ಯಾವ ಸಾಹಿತ್ಯವನ್ನೂ, ಕೊನೆಗೆ ಹೆಸರನ್ನೂ ಬಿಟ್ಟು ಹೋಗದೆ ಇರುವ ಎಷ್ಟೋ ಅನುಭಾವಿಗಳು ಆಗಿ ಹೋಗಿರಬಹುದು. ಆದರೆ ಹಲವು ಮಹಾ ಅನುಭಾವಿಗಳ ಜೀವನ ಚರಿತ್ರೆ, ಸಾಹಿತ್ಯಗಳು ಉಳಿದಿವೆ.

ಈ ಪ್ರಬಂಧದ ವ್ಯಕ್ತಿಗಳಾದ ಅಕ್ಕಮಹಾದೇವಿ ಮತ್ತು ಮೀರಾಬಾಯಿ ಪರಮ ಭಕ್ತೆಯರು, ಮಹಾ ಅನುಭಾವಿಗಳು. ಇವರು ತಮ್ಮ ದಿವ್ಯಾನುಭವದ ಸಾಹಿತ್ಯವನ್ನು ನಮಗೆ ಕರುಣಿಸಿ ಹೋಗಿದ್ದಾರೆ. ಇವರು ಹುಟ್ಟಿದ ಸ್ಥಳ ಬೇರೆ ಬೇರೆ, ಇದ್ದ ಕಾಲ ಬೇರೆ ಬೇರೆ, ಆಡಿದ ಭಾಷೆ ಬೇರೆ ಬೇರೆ, ಬೆಳೆದ ಸಂಪ್ರದಾಯ ಬೇರೆ ಬೇರೆ, ಆದರೆ ಇವರ ಭಕ್ತಿ ಸಾಧನೆ ಒಂದೇ ರೀತಿಯದ್ದು, ಭಗವತ್ಸಾಕ್ಷಾತ್ಕಾರ ದಿವ್ಯಾನುಭವಗಳು ಒಂದೇ ಬಗೆಯವು. ಇವರ ಜೀವನ ಬೇರೆಯಲ್ಲ, ಕೃತಿ ಬೇರೆಯಲ್ಲ; ಬಾಳೇ ಕೃತಿ, ಕೃತಿಯೇ ಬಾಳು. ಸತಿ ಪತಿ ಭಾವದ ಮಧುರ ಭಕ್ತಿಗೆ ಇವರ ಜೀವನ ಭವ್ಯ ನಿದರ್ಶನವಾಗಿದೆ, ದಿವ್ಯ ದರ್ಶನವಾಗಿದೆ. ಇವರಿಬ್ಬರ ಜೀವನವನ್ನು ತೌಲನಿಕವಾಗಿ ಇಲ್ಲಿ ಅಧ್ಯಯನ ಮಾಡಲಾಗಿದೆ.

## ೧-೪ ತೌಲನಿಕ ಅಧ್ಯಯನದ ಉದ್ದೇಶ ಮತ್ತು ಸ್ವರೂಪ :

ಭಾಷೆ, ಕುಲ, ಸಂಸ್ಕೃತಿ, ಧರ್ಮ ಇವುಗಳ ಹೆಸರಲ್ಲಿ ಒಡೆದು ಹೋಗಿರುವ ಮಾನವ ಜಾತಿಯಲ್ಲಿ ಏಕತೆಯನ್ನು ತರುವುದು, ಯಾವ ಕಾಲದಲ್ಲಿ ಯಾವ ಭೌಗೋಳಿಕ ಪ್ರದೇಶದಲ್ಲಿಯೇ ಆಗಲಿ, ಯಾವ ಭಾಷೆಯ ಮೂಲಕ ಅಭಿವ್ಯಕ್ತಗೊಂಡಿರಲಿ, ಮಾನವನ ಮೂಲಭೂತ ಅನುಭವಗಳು, ಆಲೋಚನೆಗಳು, ಸಮಸ್ಯೆಗಳು, ತೊಡಕುಗಳು, ಆಸೆ ಆಕಾಂಕ್ಷೆಗಳು ಒಂದೇ ಆಗಿಲ್ಲದಿದ್ದರೂ ಸಮಾನವಾಗಿರುವುದುಂಟು. ಇಂತಹ ಸಮಾನತೆಯ ಮಿಡಿತವನ್ನು ತೌಲನಿಕ ಸಾಹಿತ್ಯದ ಅಧ್ಯಯನದ ಮೂಲಕ ಅರ್ಥೈಸಿಕೊಳ್ಳಬಹುದು. ಅಂದರೆ ಬಿಡಿಬಿಡಿಯಾಗಿ ಕಾಣುವ ವಿವಿಧ ಯುಗಗಳ ಹಾಗೂ ಸಂಸ್ಕೃತಿಗಳ ಆಳದಲ್ಲಿ ಸ್ಪಷ್ಟವಾಗಿ ಕಂಡುಬರುವ ಏಕತೆಯನ್ನು ಗುರುತಿಸುವುದು ತೌಲನಿಕ ಸಾಹಿತ್ಯದ ಗುರಿ. ತೌಲನಿಕ ಸಾಹಿತ್ಯದ ಅಧ್ಯಯನವೆಂದರೆ ಎಲ್ಲಾ ಸಾಹಿತ್ಯಕ ಸೃಷ್ಟಿಯೂ ಸಾಹಿತ್ಯಾನುಭವವೂ ಸಮಾನವಾಗಿರುತ್ತದೆ ಎಂಬ ಅರಿವಿನಿಂದ ಮಾಡುವ ಅಧ್ಯಯನ ಎಂದು ರೆನೆವೆಲೆಕ್ ಹೇಳುತ್ತಾನೆ. 'ತೌಲನಿಕ ಸಾಹಿತ್ಯವೆಂದರೆ ಕೇವಲ ಪರಸ್ಪರ ಸಮಾನ ಅಂಶಗಳ ಯಾದಿಯಲ್ಲ. ಸಮಾನ ವಸ್ತುಗಳ, ಆಶಯಗಳ, ಅಭಿವ್ಯಕ್ತಿಗಳ ಆಳದಲ್ಲಿರುವ ಭಿನ್ನತೆಗಳನ್ನು ಹಾಗೂ ಭಿನ್ನ ವಸ್ತುಗಳ, ಆಶಯಗಳ, ಅಭಿವ್ಯಕ್ತಿಗಳ ಆಳದಲ್ಲಿ ಸಮಾನತೆಗಳನ್ನು ಗುರುತಿಸುವುದು; ಮತ್ತು ಅನಂತರ ಇಂತಹ ಸಮಾನ/ ಭಿನ್ನ ಅಂಶಗಳನ್ನು ಸಾಂಸ್ಕೃತಿಕ/ ವೈಚಾರಿಕ ನೆಲೆಯಲ್ಲಿ ಅರ್ಥೈಸುವುದು.' ಎಂದು ಡಾ. ಸಿ. ಎನ್. ರಾಮಚಂದ್ರ ಅವರು ಬರೆಯುತ್ತಾರೆ. (ರಾಮಚಂದ್ರ ೧೯೯೮:೫) ಒಟ್ಟಿನಲ್ಲಿ ತೌಲನಿಕ ಅಧ್ಯಯನದ ಮುಖ್ಯ ಗುರಿ ಸಾಹಿತ್ಯ ಅಧ್ಯಯನದಲ್ಲಿ ಪ್ರತ್ಯೇಕತೆಯನ್ನು ವಿರೋಧಿಸುತ್ತಾ, ಅನನ್ಯತೆಗೆ ಬದಲಾಗಿ ಸಾಧಾರಣತೆಯನ್ನು ಗುರುತಿಸಿ ಆ ಮೂಲಕ ನಮ್ಮ ಅರಿವಿನ ಎಲ್ಲೆಗಳನ್ನು ವಿಸ್ತರಿಸುವುದು ಎಂದು ಹೇಳಬಹುದು.

ತೌಲನಿಕ ಸಾಹಿತ್ಯದ ಅಧ್ಯಯನ ವಿಧಾನಗಳಲ್ಲಿ ಹಲವಾರು ಪ್ರಕಾರಗಳಿವೆ. ಅವುಗಳಲ್ಲಿ ಒಂದು ವಸ್ತು ಸಮಾನತೆಯನ್ನು ಆಧರಿಸಿದ ಅಧ್ಯಯನ. ಈ ಅಧ್ಯಯನ ವಿಧಾನ ಹೆಚ್ಚು ವ್ಯಾಪಕ ಹಾಗೂ ಜನಪ್ರಿಯ. ಇಂತಹ ಅಧ್ಯಯನದಲ್ಲಿ ಯಾವುದೋ ಒಂದು ಸಮಾನ ವಸ್ತು ಅಥವಾ ವಿಷಯ ಅಥವಾ ಒಂದು ಆಶಯವನ್ನು ಹಿಡಿದು ವಿವಿಧ ಭಾಷೆಗಳಲ್ಲಿ ಮತ್ತು ವಿವಿಧ ಕಾಲಘಟ್ಟಗಳಲ್ಲಿ ರಚಿಸಲ್ಪಟ್ಟಿರುವ ಅನೇಕ ಕೃತಿಗಳನ್ನು ಒಂದೆಡೆ ತಂದು, ಅವುಗಳನ್ನು ವಿಶ್ಲೇಷಿಸಿ, ವ್ಯಾಖ್ಯಾನಿಸಿ ಅವುಗಳು ವಸ್ತುವನ್ನು/ವಿಷಯವನ್ನು, ಆಶಯವನ್ನು ಬೆಳೆಸಿರುವ ಬಗೆಯಲ್ಲಿರುವ ಸಾಮ್ಯ ವೈಷಮ್ಯಗಳನ್ನು ಗುರುತಿಸಿ, ಅವುಗಳ ಆಧಾರದ ಮೇಲೆ ಆ ಕೃತಿಗಳು ರೂಪುಗೊಂಡ ಸಮಾಜ-ಸಂಸ್ಕೃತಿಗಳ ಬಗ್ಗೆ ವ್ಯಾಪಕ-ಚಿಂತನೆ ನಡೆಸಲು ಅವಕಾಶವಿರುತ್ತದೆ.

ಉದಾಹರಣೆಗೆ ಅಕ್ಕಮಹಾದೇವಿ ಹಾಗೂ ಮೀರಾ ವಿಭಿನ್ನ ಕಾಲಘಟ್ಟಗಳಲ್ಲಿ ಕಾಣಿಸಿಕೊಂಡ ಸಮಾನ ಮನೋಧರ್ಮದ ಅನುಭಾವಿಗಳು. ತಮ್ಮ ಸುತ್ತಿನ ಪ್ರಭುಶಕ್ತಿಯನ್ನು ನಿರಾಕರಿಸಿ, ಭಕ್ತಿಯನ್ನೇ ಆತ್ಮಸಂಗಾತವಾಗಿಸಿಕೊಂಡು, ಲೌಕಿಕದ ಗಂಡರನ್ನು ನಿರಾಕರಿಸಿ, ಅಲೌಕಿಕ ಶಕ್ತಿಯನ್ನೇ ಗಂಡನನ್ನಾಗಿಸಿಕೊಂಡವರು. ಇಬ್ಬರೂ ಸತಿ-ಪತಿ ಭಾವವನ್ನೇ ನೆಮ್ಮಿಕೊಂಡು ವೀರವಿರಾಗಿಣಿಯಾಗಿ ನಡೆದವರು. ಅಕ್ಕ ಬಸವಾದಿ ಪ್ರಮಥರ ಅನುಭಾವಗೋಷ್ಠಿಯಲ್ಲಿದ್ದು ಸಾಧನೆ ಕೈಗೊಂಡರೆ ಮೀರಾ ತನ್ನ ಸುತ್ತಿನ ಸಂತರ ನಡುವೆಯೇ ತನ್ನ ಭಕ್ತಿಯ ಸಾಧನೆಯನ್ನು ಮಾಡಿದವಳು. ಅಕ್ಕ ಹರನೇ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದರೆ ಮೀರಾ 'ಮೇರೆ ತೋ ಗಿರಿಧರ್ ಗೋಪಾಲ್ ನ ಕೋಯಿ' ಎಂದು ಆಕೆ ತನ್ನನ್ನು ಆತನಿಗೆ ಅರ್ಪಿಸಿಕೊಂಡವಳು.

ಇಂತಹ ವಸ್ತು/ವಿಷಯ/ಆಶಯಗಳ ಸಮಾನತೆಯನ್ನಾಧರಿಸಿದ ತೌಲನಿಕ ಅಧ್ಯಯನದಿಂದ ಎರಡು ನೆಲೆಗಳಲ್ಲಿ ನಮಗೆ ಪ್ರಯೋಜನವಾಗುತ್ತದೆ. ಒಂದು ಸಮಾನವಸ್ತುವನ್ನು ವಿವಿಧ ಸಮಾಜ/ಜನವರ್ಗ ನೋಡುವ ದೃಷ್ಟಿಕೋನಗಳು ಬೇರೆ ಬೇರೆಯಾಗಿರುವುದರಿಂದ ಆ ವಸ್ತುವಿನ ಸಂಪೂರ್ಣ ಅಥವಾ ಬಹುಮುಖಿ ಅರಿವು ನಮಗೂ ಉಂಟಾಗುತ್ತದೆ. ಹಾಗೆಯೇ ಸಮಾನವಸ್ತುವನ್ನು ಭಿನ್ನ ಭಿನ್ನ ನೆಲೆಗಳಲ್ಲಿ ಭಿನ್ನ ಸಮಾಜಗಳು ವಿಶ್ಲೇಷಿಸಿರುವುದರಿಂದ ಹಾಗೂ ಚಿತ್ರಿಸಿರುವುದರಿಂದ ಆಯಾಯ ಸಮಾಜಗಳ ಪ್ರಮುಖ ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಕಾಳಜಿಗಳೂ ನಮ್ಮ ಅರಿವಿಗೆ ಬರುತ್ತವೆ.

**೧-೫ ವೈಧಾನಿಕತೆ:**

ಭೌಗೋಳಿಕವಾಗಿ, ಕಾಲಿಕವಾಗಿ, ಧರ್ಮದ ನೆಲೆಯಿಂದ ಅಕ್ಕ ಮತ್ತು ಮೀರಾ ಇಬ್ಬರ ನಡುವೆ ಸ್ಪಷ್ಟವಾದ ವೈದೃಶ್ಯವಿರಬಹುದು. ಆದರೆ ಭಕ್ತಿಯ ಮನೋಧರ್ಮ, ಸಂದರ್ಭ, ಲಿಂಗ ಹಾಗೂ ವೈಚಾರಿಕತೆಯ ನೆಲೆಯಿಂದ ಇಬ್ಬರಲ್ಲೂ ಸಾದೃಶ್ಯವನ್ನು ಗುರುತಿಸಬಹುದು. ಇಬ್ಬರೂ ಅನುಭಾವದ ತುತ್ತ ತುದಿಯನ್ನು ಏರಿದವರು. ಕಲ್ಯಾಣದ ಕಡೆಗೆ ಹೊರಟ ಅಕ್ಕ ಹೆಜ್ಜೆ ಹೆಜ್ಜೆಗೂ ಕಷ್ಟಗಳನ್ನು ಎದುರಿಸಬೇಕಾಯಿತು. ನೋಡಿದರೆ ಕಣ್ಣನ್ನು ಕೋರೈಸುವ ಅವಳ ರೂಪು ಬೇರೆ ಅವಳು ಹೋದಲ್ಲೆಲ್ಲ ಅವಳ ಶತ್ರುವಾಗಿ ಕಾಡುತ್ತಿತ್ತು.

ಅಕ್ಕಮಹಾದೇವಿ ಈ ಜಗತ್ತು ಕಂಡರಿಯದ ಅಸಾಮಾನ್ಯ ಚೇತನವೆಂಬುದನ್ನು ಕಂಡುಕೊಳ್ಳಲಾರದ ಜನ ಅವಳನ್ನೂ ನಿಂದೆಗೆ ಗುರಿಪಡಿಸಿರಬೇಕು. ಅಲ್ಲಮಪ್ರಭುನಂತಹ ಅನುಭಾವಿ ಆಕೆಯನ್ನು ಅನುಭವ ಮಂಟಪದಲ್ಲಿ ಅಗ್ನಿಪರೀಕ್ಷೆಗೆ ಗುರಿಪಡಿಸಿದನು. ಇದೇ ಬಗೆಯ ಸಂದರ್ಭಗಳನ್ನು ಮೀರಾಬಾಯಿ ಎದುರಿಸಬೇಕಾಯಿತು. ಲೌಕಿಕದ ಗಂಡರನ್ನು ಇಬ್ಬರೂ

ಮೀರಬೇಕಾಗಿ ಬಂತು. ಇಬ್ಬರ ಮದುವೆಯ ಕಲ್ಪನೆಯೂ ವಿಶಿಷ್ಟವಾದುದು, ಇಬ್ಬರೂ ವ್ಯಕ್ತಪಡಿಸಿದ ಸತಿಪತಿಭಾವದ ಭಕ್ತಿಯಲ್ಲಿ ಲೌಕಿಕ ಸುಖದ ವಾಸನೆ ಅಣುಮಾತ್ರವೂ ಕಂಡುಬರುವುದಿಲ್ಲ. ಸತಿಪತಿಭಾವ ಲೌಕಿಕ ಸಂಬಂಧದ ಛಾಯೆಯನ್ನು ಕಳೆದುಕೊಂಡು ಮೇಲಕ್ಕೇರಿದಾಗಲೇ ನಿಜವಾದ ಭಕ್ತಿ ಎನಿಸಿಕೊಳ್ಳುತ್ತದೆ. ಅನುಭಾವದ ಕೊನೆಯ ಮಟ್ಟಕ್ಕೇರಿದಾಗ ಈ ಶರಣಸತಿ ತಾನೆ ಪತಿಯಾಗಿ ಪರಿಣಮಿಸುತ್ತಾಳೆ. ಈ ಸಾಧನೆಯ ಹಾದಿಯನ್ನು ಇಬ್ಬರು ಸಾಧಕಿಯರ ಸಾಹಿತ್ಯಕ ರಚನೆಗಳನ್ನು ಮುಂದಿಟ್ಟು ಪರಿಶೀಲಿಸಲು ಪ್ರಯತ್ನಿಸಿದೆ.

## ಟಿಪ್ಪಣಿ

ತೌಲನಿಕ ಸಾಹಿತ್ಯದ ಮುಖ್ಯ ಪ್ರಕಾರಗಳನ್ನೂ ಡಾ. ಸಿ. ಎನ್. ರಾಮಚಂದ್ರರು ಹೀಗೆ ಅಡಕಗೊಳಿಸುತ್ತಾರೆ :

i) ವಸ್ತು ಸಮಾನತೆಯನ್ನಾಧರಿಸಿದ ಅಧ್ಯಯನ

ii) ಪ್ರಭೇದ ಅಧ್ಯಯನ

iii) ಪ್ರಭಾವ ಅಧ್ಯಯನ

iv) ತೌಲನಿಕ ಕಾವ್ಯಮೀಮಾಂಸೆ

v) ಭಾಷಾಂತರ ಅಧ್ಯಯನ

## ಅಧ್ಯಾಯ ೨

# ಮಧ್ಯಕಾಲೀನ ಭಕ್ತಿಯ ಸ್ವರೂಪ:
# ಕನ್ನಡ ಮತ್ತು ಹಿಂದಿ ಭಾಷೆಗಳ ಸಂದರ್ಭ

ಶೈವ ಪ್ರಭೇದಗಳು

ಸಾತ್ವಿಕ ಶೈವಗಳು

ಶುದ್ಧ ಶೈವ

ತಾಂತ್ರಿಕ ಶೈವಗಳು

ಪ್ರೇಮಾಶ್ರಯೀ ಶಾಖೆ

ರಾಮಭಕ್ತಿ ಶಾಖೆ

ಕೃಷ್ಣ ಭಕ್ತಿ ಶಾಖೆ

# ಅಧ್ಯಾಯ ೨ : ಮಧ್ಯಕಾಲೀನ ಭಕ್ತಿಯ ಸ್ವರೂಪ: ಕನ್ನಡ ಮತ್ತು ಹಿಂದಿ ಭಾಷೆಗಳ ಸಂದರ್ಭ

ಹನ್ನೆರಡನೆಯ ಶತಮಾನದಿಂದ ಹದಿನಾರನೆಯ ಶತಮಾನದವರೆಗಿನ ಭಾರತದ ಧಾರ್ಮಿಕ ಮತ್ತು ಸಾಮಾಜಿಕ ಇತಿಹಾಸ ಸಾಂಸ್ಕೃತಿಕ ದೃಷ್ಟಿಯಿಂದ ಪುರರುಜ್ಜೀವನದ ಇತಿಹಾಸ. ಈ ಅವಧಿಯಲ್ಲಿ ಭರತಖಂಡದಲ್ಲಿಯ ವಿವಿಧ ಭಾಷೆಗಳಲ್ಲಿ ಸಂತರು, ಶರಣರು ಹಾಗೂ ಭಕ್ತಜನರು ನಡೆಸಿದ ಜನಾಂದೋಲನ ಆ ಸಮಯಕ್ಕಷ್ಟೆ ಅಲ್ಲ, ಸಾರ್ವಕಾಲಿಕ ಮಹತ್ವವನ್ನೂ ಪಡೆದಿದೆ. ಇವರು ದೇವರು, ಧರ್ಮ, ಆಚಾರ-ವಿಚಾರ, ಸಾಮಾಜಿಕ ಕಳಕಳಿಯೊಂದಿಗೆ ಮಾನವನ ಮತ್ತು ಸಮಾಜದ ಅಂತರಂಗ ಹಾಗೂ ಬಹಿರಂಗದ ಒಳಿತಿಗಾಗಿ ಮಾಡಿದ ಅವಲೋಕನ ವಿಮರ್ಶೆ, ಟೀಕೆ-ಟಿಪ್ಪಣಿ, ಚಿಂತನೆ ಆ ಕಾಲದ ಸಮಾಜದ ಸಂಪೂರ್ಣ ಆಗುಹೋಗುಗಳನ್ನು ದಾಖಲಿಸಿದವು. ಹಾಗೆಯೇ ಧರ್ಮ, ದೇವರು, ಜೀವ, ಜಗತ್ತು ಹಾಗೂ ಮೋಕ್ಷದ ಬಗೆಗೆ ಅವರ ಚಿಂತನೆ ಹಾಗೂ ಪರಿಕಲ್ಪನೆಗಳು ಬೆಳಕಿಗೆ ಬಂದವು. ಆ ಕಾಲದ ಭಕ್ತರು ಹಾಗೂ ಸುಧಾರಕರು ಸರ್ವೋದಯ ಸಮಾಜವನ್ನು ಪರಿಕಲ್ಪಿಸಿಕೊಂಡವರಲ್ಲಿ ಮೊದಲಿಗರು. ಅವರ ಆಧ್ಯಾತ್ಮಿಕ ಸಾಧನೆಯ ಗುರಿಯೂ ಮಾನವೀಯ ಮೌಲ್ಯಗಳಿಗೆ ಸ್ಪಂದಿಸುವುದೇ ಆಗಿದೆ. ಇದು ಭಕ್ತಿ ಸಾಹಿತ್ಯದ ಜೀವನದರ್ಶನವೇ ಆಗಿದೆ.

ನಾಗರಿಕ ಮಾನವನ ದೈನಂದಿನ ಚಟುವಟಿಕೆಗಳೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಧರ್ಮದಿಂದ ಪ್ರಭಾವಿಸಲ್ಪಟ್ಟಿರುತ್ತದೆ. ಭಾರತೀಯರ ಮಟ್ಟಿಗಂತೂ ಇದು ನಿಜ. ಮಧ್ಯಯುಗೀನ ಕರ್ನಾಟಕದ ಜನರ ಜೀವನದ ವಿಷಯದಲ್ಲಿ ಈ ಮಾತು ಮತ್ತಷ್ಟು ನಿಜ. ವೈಯಕ್ತಿಕ ಬದುಕು ಹೇಗೋ ಸಾಮಾಜಿಕ ಜೀವನವೂ ಹಾಗೆಯೇ ಮತ ಧರ್ಮ ಸಂಬಂಧಿಯಾದ ನೀತಿ ನಿಯಮಗಳಿಂದ ನಿರ್ಬಂಧಿತವಾಗಿತ್ತು. ಅವೈದಿಕ ಪರಂಪರೆ ಹಾಗೂ ವೈದಿಕ ಪರಂಪರೆ ಎರಡೂ ಜನಜೀವನದ ಮೇಲೆ ಅಪಾರವಾದ ಪ್ರಭಾವ ಬೀರಿತ್ತು.

ವಚನಕಾರರು ಕರ್ನಾಟಕದಲ್ಲಿ ಕಾಣಿಸಿಕೊಳ್ಳುವ ವೇಳೆಗೆ, ಇಲ್ಲಿ ಬೌದ್ಧ-ಜೈನಗಳಂತಹ ಅವೈದಿಕ ಪಂಥಗಳ ಜೊತೆಗೆ ವೈದಿಕ ಪರಂಪರೆಗೆ ಸೇರಿದ ಶೈವ-ವೈಷ್ಣವಗಳ ಅನೇಕ ಒಳಕವಲುಗಳು ಭಿನ್ನ-ಭಿನ್ನವಾದ ಆಚರಣೆಗಳನ್ನು ಹೊಂದಿದ್ದವು. ಬೌದ್ಧಮತವು ಈ ನಾಡಿನಲ್ಲಿ ಯಾವತ್ತಿಗೂ ಅಗಾಧವಾದ ಪ್ರಭಾವವನ್ನು ಬೀರಿರಲಿಲ್ಲ. ಅಷ್ಟಲ್ಲದೆ ಈ ವೇಳೆಗೆ ಬೌದ್ಧವು ತಾಂತ್ರಿಕಾಚರಣೆಗಳಲ್ಲಿ ತೊಡಗಿ ಕೆಲವು ಸಂದರ್ಭಗಳಲ್ಲಿ ಕುತೂಹಲಿಗಳಾದ ಸಾಧಕರನ್ನು

ಆಕರ್ಷಿಸುತ್ತ ಇದ್ದಿರಬಹುದು. ಜೈನಮತವು ಕರ್ನಾಟಕದ ರಾಜರ ಪೋಷಣೆಗೆ ಒಳಗಾದರೂ, ಕಾಲಕ್ರಮೇಣ ತನ್ನ ವಿಸ್ತಾರವಾದ ನೆಲೆಯನ್ನು ಕಳೆದುಕೊಂಡಿತು. ತನ್ನ ಪೌರಾಣಿಕ ಪರಿಕಲ್ಪನೆಗಳಲ್ಲಿ ಹೇಗೋ ಅನುದಿನದ ಮತಾಚರಣೆಗಳಲ್ಲಿಯೂ ಹಾಗೆಯೇ ವೈದಿಕ ಮತದ ವಿಭಿನ್ನ ಪಂಥಗಳು ಅನುಸರಿಸುತ್ತಿದ್ದ ಮಾರ್ಗಕ್ಕೆ ಸಮೀಪದಲ್ಲೇ ಚಲಿಸತೊಡಗಿತು. ಜನಸಾಮಾನ್ಯರ ದೃಷ್ಟಿಯಲ್ಲಿ ಬಹುಶಃ ಅವರು ಆರಾಧಿಸುತ್ತಿದ್ದ ದೈವ-ದೇವರುಗಳನ್ನು ಬಿಟ್ಟರೆ ಉಳಿದಂತೆ ಜೈನಕ್ಕೂ-ವೈದಿಕಕ್ಕೂ ದೈನಂದಿನ ಬದುಕಿನಲ್ಲಿ ಹೆಚ್ಚಿನ ವ್ಯತ್ಯಾಸವಿರಲಿಲ್ಲ.

ವಚನ ಚಳುವಳಿಯನ್ನು ಭಕ್ತಿ ಪಂಥೀಯ ಚಳುವಳಿಯಲ್ಲಿ ಒಂದು ವಿಶಿಷ್ಟ ಬೆಳವಣಿಗೆಯೆಂದೇ ಗುರುತಿಸಬೇಕಾಗುತ್ತದೆ. ಹಿಂದೂ ಧರ್ಮದ ವೈದಿಕ ಪ್ರಭುತ್ವವನ್ನೂ, ಜಾತಿ ವ್ಯವಸ್ಥೆಯ ಶ್ರೇಣೀಕರಣವನ್ನೂ ಅತ್ಯಂತ ತೀವ್ರವಾಗಿ ವಿರೋಧಿಸಿ ಮೊತ್ತಮೊದಲ ಬಾರಿಗೆ ಒಂದು ಆಂದೋಲನ ರೂಪವಾಗಿ ಈ ಚಳುವಳಿ ಪರಿವರ್ತನೆಗೊಂಡಿತು. ರಾಜತ್ವದ ವಿರುದ್ಧ ವಚನಕಾರರು ಬಂಡಾಯವೇಳಲಿಲ್ಲ ಎನ್ನುವ ಮಾತು ನಿಜವಿರಬಹುದು. ಆದರೆ ಇಲ್ಲಿ ಮುಖ್ಯ ವಿಷಯವೊಂದನ್ನು ಗುರುತಿಸಬೇಕು. ಭಾರತದ ರಾಜಕೀಯ ಇತಿಹಾಸದಲ್ಲೇ ಈ ಮಧ್ಯಕಾಲೀನ ಬೆಳವಣಿಗೆಯು ಮಹತ್ವಪೂರ್ಣ ತಿರುವನ್ನು ಪಡೆಯಿತು. ಅಖಂಡವಾಗಿದ್ದ ವಿಶಾಲ ಸಾಮ್ರಾಜ್ಯಗಳು, ರಾಜ ವ್ಯವಸ್ಥೆಗಳು ಈ ಕಾಲದಲ್ಲೇ ಹಲವು ಚೂರುಗಳಾಗಿ ಒಡೆದವು ಎಂದು ಕಲ್ಬುರ್ಗಿಯವರು ಹೇಳಿದ್ದಾರೆ.(ಬಸವರಾಜ ಕಲ್ಗುಡಿ: ೨೦೦೧)

ವೈದಿಕ ಪರಂಪರೆಯಲ್ಲಿ ವೇದಾವಲಂಬಿ ತಾತ್ವಿಕತೆ - ಆಚರಣೆಗಳಿಂದ ದೂರವಾದ ಅನೇಕ ಜನಪ್ರಿಯ ಆರಾಧನಾ ಪಂಥಗಳು ಹುಟ್ಟಿದ್ದವು. ಷಡ್ದರ್ಶನಗಳ ಉಲ್ಲೇಖವು ಈ ಕಾಲದ ಸಾಹಿತ್ಯ ಕೃತಿಗಳಲ್ಲೂ, ಶಾಸನಗಳೂ ಕಂಡುಬಂದಿವೆ. ಆದರೂ ಅಂತಹ ದಾರ್ಶನಿಕ ನಿಲುವುಗಳು ತಲುಪಿದ್ದು ಕೇವಲ ಕೆಲವರನ್ನು ಮಾತ್ರ. ಅದರಲ್ಲೂ ವೈದಿಕ ಪರಂಪರೆಯ ಬ್ರಾಹ್ಮಣರನ್ನು ವಿವಿಧ ಶೈವ ಪಂಥಗಳು ವೈಷ್ಣವ ಪಂಥಗಳು ಹಾಗೂ ಶಕ್ತಿ ಪೂಜಕ ಪಂಥಗಳು ಸಾಮಾನ್ಯ ಜನರನ್ನು ಆಕರ್ಷಿಸುತ್ತಿದ್ದವು. ಇವುಗಳಲ್ಲಿ ಹಲವು ತಾಂತ್ರಿಕಾಚರಣೆಗಳಲ್ಲಿ ತೊಡಗಿ ನಿಗೂಢವೂ, ವಿಚಿತ್ರವೂ ಆದ ವಿಧಿವಿಧಾನಗಳನ್ನು ಹೊಂದಿದ್ದವು. ಆ ಕಾಲದ ಕೆಲವು ಪಂಥಗಳು ಈ ಕೆಳಗಿನಂತಿವೆ:

**ಶೈವ ಪ್ರಭೇದಗಳು:** ಬಹುಶಃ ಒಬ್ಬನೇ ಐತಿಹಾಸಿಕ ವ್ಯಕ್ತಿಯಿಂದ ಸ್ಥಾಪಿತವಾಗಿದ್ದಿರಬಹುದಾದ ಶೈವಮತವು ಬರಬರುತ್ತ ಅನೇಕ ಶಾಖೆಗಳಾಗಿ ಒಡೆದಿರಬಹುದು. ಈ ವಿಚಾರದಲ್ಲಿ ಮತಭೇದವಿದೆ. ಶಂಕರಾಚಾರ್ಯರೇ ನಾಲ್ಕು ರೀತಿಯ ಶೈವ ಪ್ರಭೇದಗಳನ್ನು ಹೆಸರಿಸುತ್ತಾರೆ - ಶೈವ, ಪಾಶುಪತ, ಕಾರುಕ, ಸಿದ್ಧಾಂತಿ ಹಾಗೂ ಕಾಪಾಲಿಕ, ರಾಮಾನುಜೀಯ, ಕಾಶ್ಮೀರಿಗಳು ಕಾರುಕ ಸಿದ್ಧಾಂತವನ್ನು

ಕಾಳಾಮುಖ ಎಂದು ಕರೆಯುತ್ತಾರೆ. ಪತಂಜಲಿಯು ಉಲ್ಲೇಖಿಸುವ 'ಶೈವ ಭಾಗವತ' ಎಂಬುದು ಶೈವ ಪಂಥೀಯರ ಬಗೆಗಿನ ಅತ್ಯಂತ ಪ್ರಾಚೀನ ಹೆಸರು. ಹನ್ನೆಡೆನೆಯ ಶತಮಾನದ ಕನ್ನಡದ ಕವಿ ಬ್ರಹ್ಮಶಿವನು ತನ್ನ 'ಸಮಯ ಪರೀಕ್ಷೆ'ಯಲ್ಲಿ ಆ ಕಾಲದ ಕರ್ನಾಟಕದಲ್ಲಿದ್ದ ಕಾಳಾಮುಖ, ಕಾಪಾಲಿಕ, ಪಶುಪತಿ, ಶೈವ ಎಂಬ ನಾಲ್ಕು ಶೈವ ಪ್ರಭೇದಗಳನ್ನು ಹೆಸರಿಸುತ್ತಾನೆ. ಮೂಲತಃ ಕಾಳಾಮುಖ ಮತ್ತು ಪಾಶುಪತಗಳಲ್ಲಿ ಸ್ವಲ್ಪ ಮಟ್ಟಿನ ತಾತ್ವಿಕ ಭಿನ್ನತೆಗಳಿದ್ದರೂ ವಚನಕಾಲದ ಸಮಯಕ್ಕೆ ಅವೆರಡೂ ಅಭಿನ್ನವೆಂದೇ ಪರಿಗಣಿತವಾಗಿದ್ದವು. ವಿವಿಧ ವಚನಕಾರರು ತಮ್ಮ ನಿಲುವನ್ನು ಸಮರ್ಥಿಸಿಕೊಂಡು ಮಿಕ್ಕವರನ್ನು ತೆಗಳುವ ಸಂದರ್ಭದಲ್ಲಿ ಬೇರೆ-ಬೇರೆ ಶೈವ ಪ್ರಭೇದಗಳನ್ನು ಹೆಸರಿಸುತ್ತಾರೆ. ಅಕ್ಕಮಹಾದೇವಿಯ ಜಾತಿ ಶೈವ – ಅಜಾತಿ ಶೈವರನ್ನು ಹೆಸರಿಸಿದರೆ, ಮೋಳಿಗೆ ಮಾರಯ್ಯನು ಶುದ್ಧಶೈವ, ಪೂರ್ವ ಶೈವ, ಮಾರ್ಗ ಶೈವ ಮತ್ತು ಆದಿ ಶೈವಗಳನ್ನು ಗುರುತಿಸುತ್ತಾನೆ. ಆದಯ್ಯ ನು ಶುದ್ಧ, ಮಿಶ್ರ, ಸಂಕೀರ್ಣ, ಪೂರ್ವ ಮತ್ತು ಮಾರ್ಗಶೈವಗಳನ್ನು ಉಲ್ಲೇಖಿಸಿದರೆ, ಸಕಲೇಶ ಮಾದರಸನು 'ಪಂಚಮಹಾಶೈವ'ವನ್ನು ಉಲ್ಲೇಖಿಸುತ್ತಾನೆ. ಬಸವಣ್ಣ ಒಂದು ವಚನದಲ್ಲಿ 'ಷಡುಶೈವ'ದ ಉಲ್ಲೇಖ ಮಾಡುತ್ತಾನೆ. ಇವುಗಳನ್ನು ಭಕ್ತಿಗೆ ಪ್ರಾಮುಖ್ಯತೆಯನ್ನು ನೀಡುವ ಸಾತ್ವಿಕ ಶೈವಗಳು ಮತ್ತು ವಾಮಾಚಾರದ ಮಾರ್ಗ ಹಿಡಿದ ತಾಂತ್ರಿಕ ಶೈವಗಳು ಎಂದು ಎರಡು ಗುಂಪುಗಳಾಗಿ ವಿಂಗಡಿಸಬಹುದು.

**ಸಾತ್ವಿಕ ಶೈವಗಳು**

**ಶುದ್ಧ ಶೈವ**

ಆದಯ್ಯನಂತಹ ವಚನಕಾರರು ಅರುವತ್ತ ಮೂರು ಪುರಾತನರನ್ನು ಶುದ್ಧ ಶೈವರೆಂದು ಕರೆಯುವುದರಿಂದ ತಮಿಳುನಾಡಿನ ಶೈವಮತವೇ ಶುದ್ಧಶೈವವೆಂಬ ಹೆಸರಿನಿಂದ ಕರೆಯಲ್ಪಡುತ್ತಿತ್ತೆಂದು ಹೇಳಬಹುದು. ಶುದ್ಧಶೈವಕ್ಕೂ ಕಾಳಾಮುಖ – ಪಾಶುಪತರಿಗೂ ವಿಶೇಷವಾದ ಅಂತರವೇನೂ ಇರಲಿಲ್ಲ. ಅವರೆಲ್ಲ ಶಿವನ ಭಕ್ತರಾಗಿದ್ದರೂ ದುರ್ಗಿ, ವಿನಾಯಕ, ಭೈರವ ಮೊದಲಾದ ಪರಿವಾರ ದೇವರನ್ನೂ ಆರಾಧಿಸುತ್ತಿದ್ದರು. ಅಷ್ಟಲ್ಲದೆ ಅವರು ಇಷ್ಟಲಿಂಗ ಪೂಜಕರೂ ಆಗಿದ್ದರು. ಹಾಗಾಗಿ ಅಷ್ಟವಿಧಾರ್ಚನೆ – ಷೋಡಶೋಪಾಚಾರಗಳನ್ನೂ ಮಾಡುತ್ತಿದ್ದರು.

**ಕಾಳಾಮುಖ**

ಕಾಳಾಮುಖ ಗುರುಗಳು ಪ್ರಸಿದ್ಧಪಂಡಿತರೂ, ರಾಜೋಪಾಸನೆಗೆ ಒಳಗಾಗಿದ್ದವರೂ ಆಗಿದ್ದರು. ಬಳ್ಳಿಗಾವೆಯ ಕೇದಾರೇಶ್ವರ ಮಠ ಪಂಚಲಿಂಗ ಮಠಗಳ ಸ್ಥಾನಪತಿಗಳನ್ನು ಶಾಸನಗಳು

ಅತ್ಯಂತ ಗೌರವದಿಂದ ಪ್ರಶಂಸಿಸುತ್ತವೆ. ಕಾಳಾಮುಖವನ್ನು 'ಏಕ್ಕೋಟಿ ಸಮಯ' ಎಂದೂ ಕರೆಯುತ್ತಿದ್ದರು. 'ಏಕ್ಕೋಟಿ' ಎಂದರೆ 'ಏಳ್ಕೋಟಿ' ಎಂಬ ಶಬ್ದದ ಇನ್ನೊಂದು ರೂಪ. ಮೈಲಾರ ದೇವರ ಭಕ್ತರಾದ ಗೊರವಪ್ಪಗಳು ಕೂಗುವ 'ಏಳುಕೋಟಿ' ಎಂಬ ಗರ್ಜನೆಗೆ ಈ ಶಬ್ದವು ಸಂಬಂಧ ಪಟ್ಟಿದೆ. ಇದು ಶಿವನ ಅನುಗ್ರ.ಹದಿಂದ ಪದವಿಗೆ ಬಂದ ಏಳುಕೋಟಿ ಮುನೀಂದ್ರರಿಗೆ ಸಂಬಂಧಿಸುವ ವಿಷಯ. ಇಷ್ಟಲ್ಲದೆ ಮಂತ್ರಗಳ ಸಂಖ್ಯೆಯೂ ಏಳುಕೋಟಿಯಾದುದರಿಂದ ಈ ಮುನಿಗಳನ್ನು ಏಳುಕೋಟಿ ಮಂತ್ರೇಶ್ವರರೆಂದು ಕರೆಯುವ ರೂಢಿಯಿದ್ದುದಾಗಿ ಮಾಧವರ 'ಸರ್ವದರ್ಶನ ಸಂಗ್ರಹ'ದಲ್ಲಿ ಹೇಳಲಾಗಿದೆ. ಇವರು ಮುಖದ ಮೇಲೆ ಕಪ್ಪುಗೆರೆಗಳನ್ನು ಎಳೆದುಕೊಳ್ಳುತ್ತಿದ್ದುದರಿಂದ ಇವರನ್ನು 'ಕಾಳಾಮುಖ'ರು ಎನ್ನುತ್ತಿದ್ದಿಬಹುದು.

**ಪಾಶುಪತ**

ಕ್ರಿ.ಶ ೩೨ನೆಯ ಶತಮಾನದ ಆಸುಪಾಸಿನಲ್ಲಿದ್ದ ಲಕುಲೀಶ ಅಥವಾ ನಕುಲೀಶವೇ ಈ ಮತದ ಸಂಸ್ಥಾಪಕ. ಹಾಗಾಗಿ ಅದಕ್ಕೆ ಲಕುಲೀಶ ಪಾಶುಪತ ಎಂಬ ಹೆಸರೂ ಇತ್ತು. ಇದನ್ನು ಮಾಹೇಶ್ವರ ಮತ ಎಂದೂ ಹೇಳುತ್ತಿದ್ದರು. ಪಾಶುಪತ ಮತ್ತು ಕಾಳಾಮುಖರ ನಡುವಿನ ಅಂತರ ಬಹಳ ಕಡಿಮೆಯಾದುದರಿಂದ ಇವರನ್ನೂ ಒಂದೇ ಎಂದು ಭಾವಿಸಲಾಗುತ್ತಿತ್ತು. ಪಾಶುಪತ ಸನ್ಯಾಸಿಗಳು ಅಥವಾ ಗೊರವರು ವಿಚಿತ್ರವಾದ ಆಚರಣೆಗಳನ್ನು ಮಾಡುತ್ತಿದ್ದರು. 'ಕ್ರಾಥನ' (ನಿದ್ದೆ ಬಂದಂತೆ ನಟಿಸುವುದು), 'ಸ್ಪಂದನ' (ಲಕ್ವ ಹೊಡೆದಂತೆ ಮೈ ನಡುಗಿಸುವುದು) ಶೃಂಗಾರಣ (ಶೃಂಗಾರ ಚೇಷ್ಟೆಗಳನ್ನು ಮಾಡುವುದು), 'ಮಂದನ' (ಕುಂಟನಂತೆ ನಟಿಸುವುದು), 'ಅಪಿತದ್ ಭಾಷಣ' (ಅರ್ಥವಿಲ್ಲದ ಮಾತುಗಳನ್ನು ಆಡುವುದು) – ಮೊದಲಾದವನ್ನು ಮಾಡಿ ಜನರಿಂದ ಅಪಮಾನಿತರಾಗಿ, ಅದನ್ನು ಸಹಿಸಬೇಕೆಂಬ ವಿಚಿತ್ರವಾದ ಭಾವನೆ ಅವರಲ್ಲಿತ್ತು.

**ತಾಂತ್ರಿಕ ಶೈವಗಳು**

**ಕಾಪಾಲಿಕ**

ಇವರು ಶಿವಭಕ್ತರೇ ಆದರೆ ವಾಮಾಚಾರಿಗಳು. ಮನುಷ್ಯನ ಮೂಳೆಗಳ ಮಾಲೆಯನ್ನು ತೊಟ್ಟು ಶ್ಮಶಾನದಲ್ಲಿ ವಾಸಿಸುತ್ತ ಕೈಯಲ್ಲಿ ಕಪಾಲವನ್ನು ಧರಿಸಿರುವ ಶಿವನ ಮಹಾಭೈರವರೂಪದ ಆರಾಧಕನೇ ಕಾಪಾಲಿಕ. ನರಬಲಿ ಕೊಡುವುದು, ನರಮಾಂಸವನ್ನು ಶಿವನಿಗೆ ಸಮರ್ಪಿಸುವುದು, ಮಹಾಭೈರವನ ಜೊತೆಯಲ್ಲಿ ಮಹಾಭೈರವಿ ಮತ್ತು ಪಿಶಾಚಿಗಳಿಗೆ ರಕ್ತನಿವೇದನ ಮಾಡಿ ಆರಾಧಿಸುವುದು, ಈ ಪ್ರಪಂಚ ಶಿವನಿಗಿಂತ ಬೇರೆಯಲ್ಲವೆಂದು ಭಾವಿಸಿ, ಶಿವನು

ಪಾರ್ವತಿಯೊಡನಿರುವಂತೆ ತಾನೂ ಪ್ರೇಯಸಿಯೊಡನೆ ಸುಖವಾಗಿರುವುದು ಮೊದಲಾದ ಆಚರಣೆಗಳುಳ್ಳ ಕಾಪಾಲಿಕನೊಬ್ಬನ ಚಿತ್ರಣ ಕೃಷ್ಣಮಿಶ್ರ ಎಂಬವನ 'ಪ್ರಭೋದ ಚಂದ್ರೋದಯ' ಎಂಬ ಸಂಸ್ಕೃತ ನಾಟಕದಲ್ಲಿ ಬಂದಿದೆ. ಕಾಪಾಲಿಗಳನ್ನು ಮಹಾವ್ರತಿಗಳು ಎಂದೂ ಕರೆಯುತ್ತಿದ್ದರು. ಆದರೆ ಇವರಿಬ್ಬರಲ್ಲಿ ಸ್ವಲ್ಪ ಅಂತರವಿತ್ತು. ಕಾಪಾಲಿಕರು ನರಕಾಪಾಲದಲ್ಲಿ ಭಿಕ್ಷೆ ಎತ್ತುವುದಕ್ಕೆ ಪ್ರಾಮುಖ್ಯತೆಯನ್ನು ನೀಡಿದ್ದರೆ, ಮಹಾವ್ರತಿಗಳು ಎಲುಬುಗಳ ಮಾಲೆ ಧರಿಸುವುದಕ್ಕೆ ಮುಖ್ಯತ್ವವನ್ನು ನೀಡುತ್ತಿದ್ದರಂತೆ.

## ನಾಥ ಸಂಪ್ರದಾಯ

ಇದೂ ಸಹ ಕಾಪಾಲಿಕರ ಒಂದು ಪ್ರಕಾರವೇ ಆಗಿದೆ. ಇವರು ರಸಸಿದ್ಧಿಯಲ್ಲಿ ನಂಬಿಕೆ ಇಟ್ಟಿದ್ದರು. ಪಾದರಸ–ಅಭ್ರಕಗಳಿಂದ ತಯಾರಿಸಿದ ಗುಳಿಗೆಗಳ ಸೇವನೆಯಿಂದ ವಜ್ರಕಾಯವನ್ನು ಪಡೆದು ದೀರ್ಘಕಾಲ ದೇಹ ಸುಖವನ್ನು ಅನುಭವಿಸುವುದು ಇವರ ಉದ್ದೇಶವಾಗಿತ್ತು. ಪಾದರಸ ಮತ್ತು ಅಭ್ರಕಗಳು ಕ್ರಮವಾಗಿ ಶಿವನ ವೀರ್ಯ ಹಾಗೂ ಪಾರ್ವತಿಯ ರೇತಸ್ಸು ಎಂಬ ನಂಬಿಕೆ ಇವರಿಗಿತ್ತು. ನಾಥ ಪಂಥವು ಗೋರಖನಾಥನಿಂದ ಆರಂಭವಾಗಿ ವ್ಯಾಳಿ, ಚರ್ಪಟಿ, ಕೋರಾಂಟ, ರತ್ನಘೋಷ, ಭೂತನಾಥ, ನಾಗಾರ್ಜುನ, ಮಚ್ಛೇಂದ್ರ, ಗೋರಕ್ಷ, ಮಂಜುನಾಥ ಎಂಬ ನವನಾಥರಿಂದ ಪ್ರಚಾರಗೊಂಡಿತು. ಇವರಲ್ಲಿ ಒಟ್ಟಾರೆ ಒಂಬತ್ತು ಕೋಟಿ ರಸಸಿದ್ಧರಿದ್ದರೆಂಬ ನಂಬಿಕೆಯಿದೆ. ಇವರೇ ನನಕೋಟಿ ಸಿದ್ಧರು. ಇವರು ಹಠಯೋಗ, ಅಭ್ಯಾಸಯೋಗ, ಅಂಜಿಕಾಯೋಗ, ಆತ್ಮಯೋಗ, ಸಿದ್ಧಯೋಗ, ಪಿಶಾಚಯೋಗಗಳೆಂಬ 'ಷಡ್ವಿಧಕರ್ಮಗಳಲ್ಲಿ ತೊಡಗಿದ್ದರು. ಇವರು ಮಲಮೂತ್ರ ಶುಕ್ಲಗಳನ್ನು ಸೇವಿಸುತ್ತ, ವಾತಪಿತ್ತ ಶ್ಲೇಷ್ಮಗಳನ್ನೇ ಪ್ರಸಾದವಾಗಿ ನೀಡುತ್ತಿದ್ದರೆಂದು ಅಲ್ಲಮ, ಆದಯ್ಯ ಮೊದಲಾದ ವಚನಕಾರರು ಹೇಳಿದ್ದಾರೆ. ಇವರಂತೆಯೇ ಉಗ್ರರೂಪದ ಶಿವನನ್ನು ಪೂಜಿಸುತ್ತಿದ್ದವರು 'ಭೈರವ'ರೆನ್ನಿಸಿಕೊಂಡಿದ್ದರು. ಇವರು ಅರಣ್ಯದಲ್ಲಿ ವಾಸಿಸುತ್ತಿದ್ದರೆಂದು ಪಂಪ ಹೇಳಿದ್ದಾನೆ.

## ಕೌಳರು

ಇವರು ಶಕ್ತಿ ಪೂಜಕರು. ಕೌಳರು ಶಿವನನ್ನು ಒಂದೆಡೆ ಪೂಜಿಸಿದರೆ ಇನ್ನೊಂದೆಡೆ ಕುರಿಯನ್ನು ಬಲಿದುಕೊಡುತ್ತಾರೆ ಎಂದು ಬ್ರಹ್ಮಶಿವನೆಂಬ ಕವಿ ಹೇಳುತ್ತಾನೆ. ಕೌಳರಲ್ಲಿ ಪೂರ್ವ ಕೌಳ ಮತ್ತು ಉತ್ತರಕೌಳ ಎಂಬ ಎರಡು ಪ್ರಕಾರಗಳು. ಇವರಿಬ್ಬರೂ ತ್ರಿಪುರಸುಂದರಿಯ ಉಪಾಸಕರು. ಪೂರ್ವಕೌಳರು ಒಂಭತ್ತು ಸ್ತ್ರೀ ಯೋನಿಗಳ ಚಿತ್ರದ ಮಧ್ಯೆ ಬರೆದ ಯೋನಿಯನ್ನು (ಇದನ್ನು ಶ್ರೀ

ಚಕ್ರ ಎನ್ನುತ್ತಾರೆ) ಪೂಜಿಸಿದರೆ, ಉತ್ತರ ಕೌಳರು ಸಾಕ್ಷಾತ್ ಸ್ತ್ರೀ ಯೋನಿಯನ್ನೇ ಆರಾಧಿಸುತ್ತಿದ್ದರು. ಮದ್ಯ, ಮತ್ಸ್ಯ, ಮಾಂಸ, ಮುದ್ರಾ, ಮೈಥುನಗಳನ್ನು ಪಂಚ ಮುದ್ರೆಗಳು ಎನ್ನುತ್ತಿದ್ದರು. ಇವು ಪಂಚ 'ಮ' ಕಾರಗಳು. ಬ್ರಹ್ಮ ವಿಷ್ಣುಗಳು ಪುಣ್ಯಕಾರ್ಯ-ವೈದಿಕ ಕರ್ಮಗಳಿಂದ ಮೋಕ್ಷ ಸಿದ್ಧಿಸುವುದೆಂದರೆ, ಶಿವನು (ಉಮೆಯ ಪ್ರಿಯಕರ) ಮದ್ಯ-ಮೈಥುನಗಳ ಮೂಲಕ ಮೋಕ್ಷಸಾಧನೆ ಮಾಡಬಹುದೆಂದು ಹೇಳುತ್ತಾನೆ. ಎನ್ನುವ ಕೌಲ ಸನ್ಯಾಸಿಯ ಪಾತ್ರವೊಂದು ೧೦ನೆಯ ಶತಮಾನದ ಆರಂಭಕಾಲದ ಸಂಸ್ಕೃತ ನಾಟಕಕಾರ ರಾಜಶೇಖರನ 'ಕರ್ಪೂರ ಮಂಜರಿ' ಎಂಬ ನಾಟಕದಲ್ಲಿ ಬರುತ್ತದೆ.

ಈ ಮೇಲಿನ ಆರಾಧನಾ ಪಂಥಗಳಲ್ಲದೆ ಆ ಕಾಲದ ಕನ್ನಡ ನಾಡಿನಲ್ಲಿ ಸೌರರು, ಗಾಣಪತ್ಯರು, ಚಾರ್ವಾಕರು ಸ್ವಲ್ಪ ಮಟ್ಟಿಗಾದರೂ ಇದ್ದಿರಬಹುದು. ಅಲ್ಲದೆ ತಮಿಳುನಾಡಿನಲ್ಲಿ ೧೧ನೆಯ ಶತಮಾನದ ಕೊನೆಯ ಭಾಗದಲ್ಲಿ ಬಂದಿರಬಹುದಾದ ರಾಮಾನುಜರಿಂದ ಸ್ಥಾಪಿತವಾದ ವೈಷ್ಣವ ಪಂಥದ ಪ್ರಭಾವವೂ ಕರ್ನಾಟಕದಲ್ಲಿ ಸ್ವಲ್ಪ ಮಟ್ಟಿಗೆ ವಚನಕಾರರ ಕಾಲಕ್ಕಾಗಲೇ ಆಗಿದ್ದಿತು.

ಪಂಥಗಳು, ಉಪಾಸನಾ ದೈವಗಳು ಯಾವುದೇ ಆಗಿರಲಿ, ಆರಾಧನಾ ವಿಧಾನದಲ್ಲಿ ಹಿಂಸೆ-ಬೀಭತ್ಸಗಳು ತುಂಬಿಕೊಂಡಿದ್ದಿರಬೇಕು,

ಪೂಜೆಯ ನೆಪದಲ್ಲಿ ಅಸಹ್ಯವಾದ ಆಚರಣೆಗಳು ಇದ್ದಿರಬೇಕು. ಜನರು ಸಹಜ ಭಯದ ಕಾರಣದಿಂದಲೂ ಮೂಢನಂಬಿಕೆಗಳಿಂದ ಕೂಡಿದ್ದವರಾದುದರಿಂದಲೂ ಸಿಕ್ಕಿದ ವಸ್ತುಗಳನ್ನೆಲ್ಲ ಪೂಜಿಸುವ ಪರಿಪಾಠವಿತ್ತು.

"ಮಡಕೆ ದೈವ, ಮೊರ ದೈವ, ಬೀದಿಯ ಕಲ್ಲು ದೈವ , ಹಣಿಗೆ ದೈವ, ಬಿಲ್ಲ ನಾರಿ ದೈವ ಕಾಣಿಭೋ, ಕೊಳಗ ದೈವ, ಗಿಣ್ಣಿಲು ದೈವ ಕಾಣಿಭೋ ದೈವ ದೈವವೆಂದು ಕಾಲಿಡಲಿಂಬಿಲ್ಲ"

ಎಂದು ಬಸವಣ್ಣ ತನ್ನ ವಚನದಲ್ಲಿ ಹೇಳುವಂತಹ ಪರಿಸ್ಥಿತಿ ಇತ್ತು. ಅದರ ಜೊತೆಗೆ ವಾಮಾಚಾರ ವಿಚಿತ್ರ ಆರಾಧನಾ ವಿಧಾನಗಳೂ ಇದ್ದವು. ಉದಾಹರಣೆಗೆ ಮೈಲಾರನ ಭಕ್ತರು: ಅವರು ನಾಯಿಗಳಂತೆ ಬೊಗಳುತ್ತಿದ್ದರು; ಮಹಾವ್ರತಿಗಳ ವಿಚಿತ್ರ ನಡವಳಿಕೆಗಳಿದ್ದವು. ಬಲಿಯ ಪರಿಪಾಠವಂತೂ ಇದ್ದದ್ದೇ. ವೈದಿಕ ಸಮ್ಮತವಾದ ಯಜ್ಞಕಾಲದ ಬಲಿಗಳಲ್ಲದೆ, ಕ್ಷುದ್ರ ದೈವಗಳಿಗೆ ಶಾಂತಿಕಾರಣದಿಂದ ಮಾಡುತ್ತಿದ್ದ ಬಲಿಗಳು ಬೇರೆ. ಹೀಗಾಗಿ ಜನರ ಮಾನಸಿಕ ಅಸ್ಥಿರತೆ, ಪ್ರಚ್ಛನ್ನ ಲಂಪಟತೆ, ಧರ್ಮದ ಹೆಸರಿನ ಸುಖಾನ್ವೇಷಣೆ, ಅನಾಚಾರ, ದುರಾಸೆ – ಇವು ಪ್ರಾಯಶಃ ಅತಿ ಹೆಚ್ಚಿನ ಪ್ರಮಾಣದಲ್ಲಿ ಆ ಕಾಲದ ಜೀವಪರ ವ್ಯಕ್ತಿಗಳಲ್ಲಿ ಹೇಸಿಗೆಯನ್ನುಂಟುಮಾಡುವ

ಪರಿಸ್ಥಿತಿಯಿತ್ತು. ದೇವರು-ದಿಂಡಿರ ಹೆಸರಿನ ಈ ಆಚರಣೆಗಳು ವಾತವರಣದಲ್ಲಿ ಹೇಸಿಗೆಯನ್ನು ತುಂಬಿತ್ತು. (ಡಾ.ಪಿ.ವಿ. ನಾರಾಯಣ: ೧೯೮೩)

ಹಿಂದಿ ಸಾಹಿತ್ಯದ ಇತಿಹಾಸವನ್ನು ನಾಲ್ಕು ಯುಗಗಳಾಗಿ ವಿಂಗಡಿಸಿದ್ದಾರೆ

೧) ಆದಿಕಾಲ ಅಥವಾ ವೀರಗಾಥಾ ಕಾಲ ೧೦೫೦ ರಿಂದ ೧೩೭೫

೨) ಭಕ್ತಿಕಾಲ ೧೩೭೫ ರಿಂದ ೧೭೦೦

೩) ರೀತಿಕಾಲ ೧೭೦೦ ರಿಂದ ೧೯೦೦

೪) ಆಧುನಿಕ ಕಾಲ ೧೯೦೦ ರಿಂದ ಇಂದಿನವರೆಗೆ

ಪ್ರತಿಯೊಂದು ಕಾಲದ ಸಾಹಿತ್ಯವು ಆಯಾಕಾಲದ ರಾಜಕೀಯ, ಸಾಮಾಜಿಮ, ಆರ್ಥಿಕ ಮತ್ತು ಧಾರ್ಮಿಕ ಪರಿಸ್ಥತಿಗಳೇ ಉತ್ಪನ್ನ ಎನ್ನಬಹುದು.

ಆದಿಕಾಲದಲ್ಲಿ (೧೦೫೦-೧೩೨೫) ದೇಶದ ವಾತಾವರಣವು ಅಶಾಂತಿಯುತವಾಗಿತ್ತು, ಸಂಘರ್ಷದಿಂದ ಕೂಡಿತ್ತು. ಒಳಜಗಳಗಳು, ಆಕ್ರಮಣಗಳು, ಅತ್ಯಾಚಾರಗಳು, ಹಿಂಸೆಗಳು ಅಧಿಕವಾಗಿದ್ದವು. ರಜಪೂತರ ಶಕ್ತಿ ಅಡಗಿತು. ಹಮ್ಮೀರದೇವನ ಪತನವಾಯಿತು. ಪ್ರಜೆಗಳು ಅನಾಥರಾದರು. ಇಂತಹ ಪರಿಸ್ಥಿತಿಯಲ್ಲಿ ಜನರು ಭಗವಂತನ ಮೊರೆಹೋದರು ಭಕ್ತಿಯುಗ ನಿರ್ಮಾಣಕ್ಕೆ ಅನುಕೂಲವಾಯಿತು. ಇಂತಹ ಪರಿಸ್ಥಿತಿಯಲ್ಲಿ ಭಕ್ತಿ ಭಾಗೀರಥಿ ದಕ್ಷಿಣದಿಂದ ಉತ್ತರಕ್ಕೆ ಹರಿಯಿತು. ಭಕ್ತಿ ದ್ರಾವಿಡ ದೇಶದಲ್ಲಿ ಹುಟ್ಟಿತೆಂದೂ, ಅದನ್ನು ರಾಮಾನಂದರು ಉತ್ತರಕ್ಕೆ ಒಯ್ದರೆಂದೂ ಕಬೀರರು ಹೇಳಿದ್ದಾರೆ. (ಡಾ ಎಂ. ಎಸ್. ಕೃಷ್ಣಮೂರ್ತಿ ೧೯೭೬)

ರಾಮಾನುಜಾಚಾರ್ಯರು (ಕ್ರಿ.ಶ.೧೦೧೬) ಶಾಸ್ತ್ರೀಯ ಪದ್ಧತಿಯಲ್ಲಿ ಸಗುಣ ಭಕ್ತಿಯನ್ನು ನಿರೂಪಿಸಿದರು. ಅವರ ಈ ಉದಾರ ಮನೋಭಾವದಿಂದ ಜನ ಸಾಮಾನ್ಯರು ಶ್ರೀ ವೈಷ್ಣವ ಧರ್ಮದ ಕಡೆಗೆ ಆಕರ್ಷಿತರಾದರು. ಅವರ ನಂತರ ಕರ್ನಾಟಕದಲ್ಲಿ ಮಧ್ವಚಾರ್ಯರು ದ್ವೈತ ಮತ ಸ್ಥಾಪನೆ ಮಾಡಿ ಭಕ್ತಿಯ ಪ್ರಸಾರಕ್ಕೆ ಅನುವು ಮಾಡಿಕೊಟ್ಟರು. ರಾಮಾನುಜರ ಪರಂಪರೆಯಲ್ಲಿಯ ಸುಮಾರು ೧೪ನೆಯ ಶತಮಾನದ ಆರಂಭದಲ್ಲಿ ರಾಮಾನಂದರು ಆಗಿ ಹೋದರು.

ಧಾರ್ಮಿಕ ಕ್ಷೇತ್ರದಲ್ಲಿ ಇವರು ಮಡಿ ಮೈಲಿಗೆ, ಜಾತಿ ಮತದ ನಿರ್ಬಂಧಗಳನ್ನು ತೊಡೆದುಹಾಕಿ ಧರ್ಮದ್ವಾರವನ್ನು ಸರ್ವರಿಗೂ ಸಮಾನವಾಗಿ ತೆರೆದಿಟ್ಟರು. ಇವರ ಪರಂಪರೆಯಲ್ಲೇ ಕಬೀರದಾಸ, ತುಲಸೀದಾಸ ಮೊದಲಾದವರು ಬರುತ್ತಾರೆ. ಇವರ ನಂತರ ದಕ್ಷಿಣದವರೇ ಆದ ವಲ್ಲಭಾಚಾರ್ಯರು ಶುದ್ಧಾದ್ವೈತ ಮತದ ಮೂಲಕ ಕೃಷ್ಣಭಕ್ತಿಯನ್ನು ಪ್ರಸಾರ ಮಾಡಿದರು. ಇವರ ಪರಂಪರೆಯಲ್ಲೇ ಸೂರದಾಸ, ನಂದದಾಸ ಮೊದಲಾದವರು ಬರುತ್ತಾರೆ.

ಈ ರೀತಿ ಹಿಂದಿಯ ಮಧ್ಯಯುಗದ ಭಕ್ತಿ ಆಂದೋಲನಕ್ಕೆ ದಕ್ಷಿಣದ ಕೊಡುಗೆ ಮಹತ್ವದ್ದು. ಭಕ್ತಿಕಾಲವನ್ನು ಹಿಂದಿಯ ಸ್ವರ್ಣಯುಗವೆಂದು ಕರೆಯುತ್ತಾರೆ. ಈ ಯುಗ ವಿಸ್ತಾರ, ವೈವಿಧ್ಯ, ಆಳ, ಅಗಲ, ಎತ್ತರ ಎಲ್ಲ ದೃಷ್ಟಿಯಿಂದಲೂ ಸ್ವರ್ಣಯುಗವೆನ್ನಬಹುದು. ಈ ಯುಗದಲ್ಲಿ ಭಕ್ತಿಯ ಅನೇಕ ರೂಪಗಳು ಕಾಣಸಿಗುತ್ತವೆ.

ಮಧ್ಯಯುಗದಲ್ಲಿ ನಡೆದ ಈ ಭಕ್ತಿ ಆಂದೋಲನ ದೇಶದ ಧಾರ್ಮಿಕ ಇತಿಹಾಸದಲ್ಲೇ ಪ್ರಮುಖವಾದುದು. ಈ ಯುಗದ ಎಲ್ಲ ಧರ್ಮಪಂಥಗಳಲ್ಲಿ ಕಂಡುಬರುವ ಸಮಾನ ತತ್ವಗಳು ಹೀಗಿವೆ:

೧) ಪ್ರೇಮವೇ ಪರಮ ಪುರುಷಾರ್ಥ, ಮೋಕ್ಷವಲ್ಲ. (ಪ್ರೇಮಾ ಪುಮರ್ಥೋ ಮಹಾನ್ ।)

೨) ದೇವರತ್ತ ತೋರುವ ಪ್ರೇಮ ಕುಲೀನಕ್ಕಿಂತಲೂ ಶ್ರೇಷ್ಠವಾದುದು.

೩) ಭಕ್ತ ಇಲ್ಲವೇ ಸಂತ ದೇವರಿಗಿಂತಲೂ ದೊಡ್ಡವನು

೪) ಭಕ್ತಿಯಿಲ್ಲದ ಶಾಸ್ತ್ರಜ್ಞಾನ, ಪಾಂಡಿತ್ಯಗಳು ವ್ಯರ್ಥ

೫) ಭಗವಂತನ ನಾಮ ರೂಪಕ್ಕಿಂತಲೂ ದೊಡ್ಡದು.

ಭಕ್ತಿ ಆಂದೋಲನದ ಈ ಪಂಚಸೂತ್ರಗಳು ಹಿಂದಿಯ ಸಾಹಿತ್ಯಕ್ಕಷ್ಟೇ ಅಲ್ಲ ಭಾರತದ ಇತರ ಎಲ್ಲ ಭಾಷೆಯ ಭಕ್ತಿ ಸಾಹಿತ್ಯಕ್ಕೂ ಅನ್ವಯವಾಗುತ್ತವೆ. ವಿಶ್ವವ್ಯಾಪಕವೂ, ಉದಾತ್ತವೂ ಆದ ಆದರ್ಶವನ್ನಿಟ್ಟುಕೊಂಡ ಈ ಭಕ್ತಿ ಆಂದೋಲನ ನಿಜವಾದ ಅರ್ಥದಲ್ಲಿ ಜನಾಂದೋಲನವಾಯಿತು.

ಈ ಭಕ್ತಿಯ ಮುಖ್ಯ ಶಾಖೆಗಳನ್ನು ಈ ರೀತಿ ವಿಂಗಡಿಸಬಹುದು:




**ನಿರ್ಗುಣ ಧಾರೆ**

**ಜ್ಞಾನಾಶ್ರಯೀ ಶಾಖೆ**

ಇದನ್ನು ಸಂತಮತ ಎಂದೂ ಕರೆಯುತ್ತಾರೆ. ಕಬೀರನನ್ನು ಇದರ ಪ್ರವರ್ತಕನೆನ್ನಬಹುದು. ಇವನು ವಜ್ರಯಾನ ಶೈವ, ತಂತ್ರಮತ ಹಠಯೋಗ ಮೊದಲಾದವುಗಳ ಸಮ್ಮಿಶ್ರಣ ಮತ್ತು ನಾಮದೇವನ ಪರಂಪರೆ ಹಾಗೂ ರಾಮಾನಂದರ ರಾಮಾವತಾರ ಸಂಪ್ರದಾಯಗಳ ಸಹಾಯದಿಂದ ನಿರ್ಗುಣಧಾರೆಯನ್ನು ಆರಂಭಿಸಿದನು. ನಿರ್ಗುಣಧಾರೆ ೨-೩ ಶತಮಾನಗಳವರೆಗೆ ಮುಂದುವರೆಯಿತು. ಆದರೆ ಅದು ಸಗುಣಧಾರೆಯನ್ನು ಎದುರಿಸಲಾದರೆ ಹೋದರೂ ಅಳಿಯದೆ ಉಳಿದುಕೊಂಡಿತು.

**ಜ್ಞಾನಾಶ್ರಯೀ ಶಾಖೆ ಅಥವಾ ಸಂತ ಸಾಹಿತ್ಯದ ವೈಶಿಷ್ಟ್ಯಗಳು**

೧) ಈ ಶಾಖೆಯ ಕವಿಗಳು ಜ್ಞಾನಕ್ಕೆ ಹೆಚ್ಚು ಮಹತ್ವ ನೀಡಿದರು. ನಿರಂಜನ, ನಿರಾಕಾರ, ತ್ರಿಗುಣಾತೀತನಾದ ಭಗವಂತನ ಆರಾಧನೆಯನ್ನು ಇವರು ಮಾಡುತ್ತಿದ್ದರು ಹಾಗಾಗಿ ಇದನ್ನು ನಿರ್ಗುಣ ಭಕ್ತಿ ಶಾಖೆ ಎಂದರು, ಇವರಿಗೆ ನಾಮ ರೂಪಕ್ಕಿಂತ ದೊಡ್ಡದು.

೨) ಈ ಕವಿಗಳು ಸೂಫೀಗಳ ಪ್ರೇಮತತ್ವ, ಶಂಕರಾಚಾರ್ಯರ ಅದ್ವೈತವಾದ, ಹಠಯೋಗಿಗಳ, ಸಿದ್ಧರ ಯೋಗ ಸಾಧನೆ, ವೈಷ್ಣವರ ಅಹಿಂಸೆ ಮೊದಲಾದವುಗಳನ್ನು ಸ್ವೀಕರಿಸಿ ಸಮನ್ವಯವನ್ನು ಸಾಧಿಸಿದರು. ಅನುಭಾವಕ್ಕೆ ವಿಶೇಷವಾದ ಮಹತ್ವವನ್ನು ನೀಡಿದರು.

೩) ನಿರ್ಗುಣ ಕವಿಗಳು ಜಾತಿ ಪಂಥ, ಮಡಿ ಮೈಲಿಗೆ, ವರ್ಣಾಶ್ರಮ ಧರ್ಮ, ಮೂರ್ತಿ ಪೂಜೆ, ತೀರ್ಥಯಾತ್ರೆ, ವ್ರತ, ರೋಜಾ-ನಮಾಜು ಇತ್ಯಾದಿಗಳನ್ನು ವಿರೋಧಿಸಿದರು. ಆತ್ಮಶುದ್ಧಿಗೆ ಹೆಚ್ಚಿನ ಮಹತ್ವವನ್ನು ನೀಡಿದರು. ಇವರಲ್ಲಿ ಹೆಚ್ಚಿನವರು ದುರ್ಬಲವರ್ಗದವರು.

೪) ಈ ಶಾಖೆಯ ಕವಿಗಳು ಮೊದಲಿಗೆ ಸಾಧಕರು, ಸಂತರು, ಭಕ್ತರು ನಂತರ ಕವಿಗಳು. ಇವರು ನಾಮೋಪಾಸಕರು. ಇವರು ಮುಖ್ಯವಾಗಿ ವೈಯಕ್ತಿಕವಾದಿಗಳು, ಸ್ವಚ್ಛಂದವಾದಿಗಳು. ವೈಯಕ್ತಿಕ ಸಾಧನೆಗೆ ಹೆಚ್ಚು ಮಹತ್ವವನ್ನು ನೀಡಿದರು. ಸಾಮಾಜಿಕ ವ್ಯವಹಾರದಲ್ಲಿ ಉದಾರವಾದ ದೃಷ್ಟಿಕೋನ ಇವರಿಗಿತ್ತು.

೫) ಇಲ್ಲಿ ಗುರುವಿಗೆ ಅತ್ಯಂತ ಶ್ರೇಷ್ಠ ಸ್ಥಾನವನ್ನು ನೀಡಲಾಗಿತ್ತು. ಇವರ ಪ್ರಕಾರ ದೇವರಿಗಿಂತಲೂ ಗುರುವೇ ದೊಡ್ಡವನು, ಶ್ರೇಷ್ಠನು.

೬) ಈ ಶಾಖೆಯಲ್ಲಿ ಆತ್ಮ ಸತಿ ಪರಮಾತ್ಮ ಪತಿ ಎಂಬ ಮಧುರಭಾವವಿದೆ.

೭) ಈ ಸಾಹಿತ್ಯದ ಪ್ರಧಾನರಸ ಶಾಂತ, ಸ್ಥಾಯೀ ಭಾವ ನಿರ್ವೇದ, ವಿರಹ ವರ್ಣನೆಯಲ್ಲಿ ಶೃಂಗಾರ ರಸ ಬರುತ್ತದೆ.

೮) ಸಂತಕಾವ್ಯದಲ್ಲಿ ಖಡೀಬೋಲಿಗೆ ಪ್ರಾಧಾನ್ಯವನ್ನು ನೀಡಲಾಗಿದೆ.

ಈ ಕವಿಗಳಲ್ಲಿ ಹೆಚ್ಚಿನವರು ಅಶಿಕ್ಷಿತರು. ಇವರಲ್ಲಿ ಭಾಷಾ ಶುದ್ಧಿಗೆ ಮಹತ್ವವಿಲ್ಲ. ಹಲವು ಭಾಷೆಗಳ ಶಬ್ದಗಳ ಮಿಶ್ರಣ ಇಲ್ಲಿದೆ. ಇದನ್ನು ಸಧುಕ್ಕಡೀ ಎನ್ನುತ್ತಾರೆ. ದೋಹೆ ಮತ್ತು ಪದಗಳು ಮುಖ್ಯ ಛಂದಸ್ಸುಗಳಾಗಿವೆ. ಇಲ್ಲಿ ಮುಕ್ತಕಗಳಿಗೆ ಪ್ರಾಧಾನ್ಯವನ್ನು ನೀಡಲಾಗಿದೆ. ಇಲ್ಲಿ ದೀರ್ಘ ಕಾವ್ಯಗಳಿಲ್ಲ.

೯) ಬೆಡಗಿನ ವಚನಗಳಂತಹ 'ಉಲಟ್ ಬಾಂಸಿ' ಎಂಬ ವಿರೋಧಾತ್ಮಕ ವಾಣಿ ಇಲ್ಲಿ ಸಿಗುತ್ತದೆ.

ಈ ಸಂತರು ಹಿಂದೂಗಳ ಅವತಾರವಾರ, ಮೂರ್ತಿಪೂಜೆ, ತೀರ್ಥ ವ್ರತ ಮುಂತಾದವುಗಳ ಜೊತೆಗೆ ಮುಸಲ್ಮಾನರ ರೋಜಾ, ಹಲಾಲ್, ನಮಾಜ್ ಇತ್ಯಾದಿಗಳನ್ನೂ ಖಂಡಿಸಿದ್ದಾರೆ.

ಕಬೀರ, ರೈದಾಸ, ಧರ್ಮದಾಸ, ಗುರುನಾಯಕ್, ದಾದೂದಯಾಲ್, ಮಲೂಕದಾಸ, ಗುರು ಅಂಗದ, ಅಮರದಾಸ, ರಾಮದಾಸ, ಅರ್ಜುನದೇವ, ಗೋವಿಂದದಾಸ ಮೊದಲಾದವರು ಶ್ರೇಷ್ಠ ಅನುಭಾವೀ ಸಂತರು.

ನಿರ್ಗುಣ ಸಂತರಲ್ಲಿ ಅನೇಕ ಸಂಪ್ರದಾಯಗಳು ಹುಟ್ಟಿಕೊಂಡವು. ಕಬೀರ ಪಂಥ, ದಾದೂ ಪಂಥ, ಸಾಧು ಸಂಪ್ರದಾಯ, ಚರಣದಾಸೀ ಮತ, ಗರೀಬದಾಸೀ ಪಂಥ, ಸತ್ತನಾಮೀ ಪಂಥ,

ಪ್ರಾಣ ನಾಥೀ ಪಂಥ, ರಾಧಾಸ್ವಾಮಿ ಮಾರ್ಗ, ನಿರಂಜನೀ ಸಂಪ್ರದಾಯ ಇತ್ಯಾದಿಗಳು ಇವುಗಳಲ್ಲಿ ಪ್ರಮುಖವಾದವು. ಇವುಗಳಲ್ಲಿ ಸ್ವಲ್ಪ ಅಂತರವಿದ್ದರೂ ಸಾಮ್ಯವೇ ಹೆಚ್ಚು.

ಸಂತರಲ್ಲಿ ಹೆಚ್ಚಿನವರು ಅನಕ್ಷರಸ್ಥರು ಹಾಗೂ ದುರ್ಬಲ ವರ್ಗಕ್ಕೆ ಸೇರಿದವರು ಆದರೆ ದೀನಹೀನರೆಂದು ಶತಶತಮಾನಗಳಿಂದ ತುಳಿತಕ್ಕೊಳಗಾದ ಜನರ ನೋವು ಇವರ ವಾಣಿಯಲ್ಲಿ ಎದ್ದು ಕಾಣುತ್ತದೆ. ಅದರಲ್ಲಿ ನಮ್ಮಜನರ ಆಕ್ರೋಶ, ಆಕಾಂಕ್ಷೆ, ವೇದನೆ, ನಿವೇದನೆಯಿದೆ. ಸಂತರು ಮೊದಲು ಸಾಧಕರು, ನಂತರ ಸಮಾಜ ಸುಧಾರಕರು. ಆಧ್ಯಾತ್ಮಿಕ ಸಾಮ್ಯವಾದದ ದ್ರಷ್ಟಾರರಾದ ಸಂತರ ವಾಣಿ ನಿಜವಾದ ಅರ್ಥದಲ್ಲಿ ಲೋಕವಾಣಿ, ಸತ್ತವರನ್ನು ಎತ್ತಬಲ್ಲ ಅಮೃತವಾಣಿ, ಅವರ ವಾಣಿಯಲ್ಲಿ ಅಲಂಕಾರ, ಛಂದಸ್ಸು ಕಲೆಗಾರಿಕೆ ಇಲ್ಲದಿರಬಹುದು. ಆದರೆ ಸತ್ಯದ ನಿಷ್ಠೆಯಿದೆ. ಅವರ ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ.

## ಪ್ರೇಮಾಶ್ರಯೀ ಶಾಖೆ

### ಸೂಫೀಧರ್ಮ, ಸ್ವರೂಪ, ಉಗಮ ಹಾಗೂ ಪೂರ್ವ ಪರಂಪರೆ

ಸೂಫೀಧರ್ಮ ಪ್ರೇಮಧರ್ಮ ಇದು ಅರೇಬಿಯಾದಲ್ಲಿ ಹುಟ್ಟಿಕೊಂಡಿತು. ಈ ಧರ್ಮ ಇಸ್ಲಾಂನಷ್ಟೇ ಪ್ರಾಚೀನವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಸಿದ್ಧರು, ಯೋಗಿಗಳು, ಹಾಗೂ ವೇದಾಂತಿಗಳಂತೆ ಸೂಫೀಗಳೂ ಕೂಡ ಆತ್ಮ ಪರಮಾತ್ಮರ ಅದ್ವೈತಭಾವದಲ್ಲಿ ನಂಬಿಕೆಯಿಟ್ಟವರು. ಈ ಅದ್ವೈತ ಭಾವವನ್ನು ಅವರು ಅನ-ಅಲ್-ಹಕ್ (ಅಹಂ ಬ್ರಹ್ಮಾಸ್ಮಿ) ಎನ್ನುತ್ತಾರೆ. ಅವರ ಗುರಿ ಈ ಭಾವದ ಅನುಭವ. ಈ ಅನುಭವಕ್ಕಾಗಿ ಅವರು ಅನುಭಾವದ ಹಾದಿ ಹಿಡಿಯುತ್ತಾರೆ. ಈ ಅನುಭಾವೀ ಪ್ರವೃತ್ತಿ ಇಸ್ಲಾಂ ವಿರೋಧವಾದುದಂತೆ. ಇಸ್ಲಾಂನಲ್ಲಿ ಆಚಾರಕ್ಕೆ ಪ್ರಾಧಾನ್ಯವಾದರೆ ಸೂಫೀಗಳಲ್ಲಿ ಅನುಭೂತಿಗೆ ಪ್ರಾಧಾನ್ಯ. ಸನಾತನ ಇಸ್ಲಾಂ ಧರ್ಮದ ಪ್ರಕಾರ ಆತ್ಮ ಪರಮಾತ್ಮರ ನಡುವೆ ವೈಯಕ್ತಿಕ ಸಂಬಂಧ ಅಸಂಭವ ಆದರೆ ಸೂಫೀಗಳ ಪ್ರಕಾರ ಇದು ಸಾಧ್ಯ.

ಸೂಫೀಗಳ ಸಾಧನಾ ಮಾರ್ಗದ ಪರಿಚಯದ ಮುನ್ನ ಈ ಮತದ ಹುಟ್ಟು ಮತ್ತು 'ಸೂಫೀ' ಶಬ್ದದ ಅರ್ಥದ ಬಗೆಗೆ ತಿಳಿಯುವುದು ಅಗತ್ಯ. ಇವೆರಡರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.

ಸೂಫೀ ಮತ ಬಹಳ ಪ್ರಾಚೀನವಾದುದು 'ಸೂಫೀ' ಶಬ್ದ ಗ್ರೀಕಿನ 'ಸೋಫೋಸ್' (ಜ್ಞಾನ) ಶಬ್ದದಿಂದ ಬಂದಿದೆ. ಎಂಬುದು ಒಂದು ವಾದವಾದರೆ 'ಸಫ್' ಎಂದರೆ ಪಂಕ್ತಿ ನಿರ್ಣಯದ ದಿನ ಹಜರತ್ ಮಹಮದ್‌ರ ಸಹಾಯದಿಂದ ದೇವರ ಮುಂದೆ ಪಂಕ್ತಿಯಲ್ಲಿ ನಿಲ್ಲುವರು ಎಂಬುದು

ಇನ್ನೊಂದು ವಾದ. ಮತ್ತೊಂದು ಅಭಿಪ್ರಾಯದ ಪ್ರಕಾರ 'ಸೂಫಿ' ಶಬ್ದ 'ಸಫ್' (ಸಾಫ್)ದಿಂದ ಬಂದಿದೆ. ಮದೀನಾದ ಮಸೀದಿಯ ಎದುರಿಗಿರುವ ಜಗಲಿಗೆ 'ಸಫ್' ಎಂದು ಹೆಸರು. ಆದರೆ ಹೆಚ್ಚಿನ ವಿದ್ವಾಂಸರು 'ಸೂಫೀ' ಶಬ್ದ 'ಸೂಫಾ' ಎಂದರೆ 'ಉಣ್ಣೆ' ಶಬ್ದದಿಂದ ಬಂದಿದೆ ಎನ್ನುತ್ತಾರೆ. ಇವರ ಪ್ರಕಾರ ಸೂಫೀಗಳು ಉಣ್ಣೆಯ ಬಟ್ಟೆ ಇಲ್ಲವೇ ಕುಲಾವಿ ತೊಟ್ಟು ಅಲೆಯುತ್ತಿದ್ದರು.ಫಾರಸಿಯಲ್ಲಿ ಈ ಸೂಫೀಗಳನ್ನು 'ಪಶ್ಮೀನಾ ಪೋಶ್' ಎಂದರೆ ಉಣ್ಣೆಯ ಬಟ್ಟೆಯನ್ನು ಧರಿಸುವವರು ಎಂದು ಹೇಳಿದೆ (ಡಾ. ಎಂ. ಎಸ್. ಕೃಷ್ಣಾಮೂರ್ತಿ: ೧೯೭೬) ಗುರುನಾಥ ಜೋಶಿಯವರು ಸಂಪಾದಿಸಿದ ನಿಘಂಟನಲ್ಲಿ ಪವಿತ್ರ, ನಿರ್ದೋಷ ಎಂಬ ಅರ್ಥವಿದೆ.

ಸೂಫೀಗಳ ಇತಿಹಾಸವನ್ನು ನಾಲ್ಕು ಭಾಗಗಳಾಗಿ ವಿಭಜಿಸಲಾಗಿದೆ: ೧) ಆದಿಯುಗ ೨) ಪೂರ್ವಮಧ್ಯಯುಗ ೩) ಉತ್ತರ ಮಧ್ಯಯುಗ ೪) ಆಧುನಿಕ ಯುಗ

**ಆದಿಯುಗ:** ಈ ಯುಗದ ಸೂಫೀಗಳು ಸತ್ಯಾನ್ವೇಷಿಗಳು, ಅತ್ಯಂತ ಸರಳರೂ, ನಿರಾಡಂಬರಿಗಳೂ ಆಗಿದ್ದರು. ವೈರಾಗ್ಯಕ್ಕೆ ಹೆಚ್ಚಿನ ಮಹತ್ವ ಕೊಟ್ಟು ಧಾರ್ಮಿಕ ರೂಢಿಗಳನ್ನೂ ಪಾಲಿಸುತ್ತಿದ್ದರು.

ಇಬ್ರಾಹಿಂ, ಆದಂ, ಫುಜಮಾಲ್, ರಬಿಯಾ ಮೊದಲಾದವರು ಈ ಕಾಲದ ಪ್ರಮುಖ ಸೂಫೀಗಳು.

**ಪೂರ್ವ ಮಧ್ಯಯುಗ** : ೯ನೆಯ ಶತಮಾಣದ ಆರಂಭದಿಂದ ಈ ಯುಗದ ಆರಂಭವಾಯಿತು. ಈ ಯುಗದಲ್ಲಿ ಸೂಫೀ ಮತದಲ್ಲಿ ಕೆಲವು ಬದಲಾವಣೆಗಳಾದವು. ಇವರಲ್ಲಿ ಭಾವನಾತ್ಮಕ ಚಿಂತನೆ ಹುಟ್ಟಿಕೊಂಡಿತು. ಸುಲೇಮಾನ್, ದಾರಾನೀ ಜಊಲ್ಲೂನ್, ಮನ್ಸೂರ್ ಮೊದಲಾದವರು ಈ ಯುಗದ ಪ್ರಮುಖ ಸೂಫೀಗಳು. ಶ್ರೇಷ್ಠ ತತ್ವಜ್ಞಾನಿ ಮಹಮ್ಮದ್ ಅಲ್ ಗಜಾಲೀ ಸಹ ಇದೇ ಸಮಯದವನು. ಇವನು ಸೂಫೀ ಮತ್ತು ಇಸ್ಲಾಂ ಮತದ ನಡುವೆ ಹೊಂದಾಣಿಕೆ ಮಾಡಲು ಪ್ರಯತ್ನಿಸಿದನು.

**ಉತ್ತರ ಮಧ್ಯಯುಗ** : ಈ ಯುಗದಲ್ಲಿ ಸೂಫೀ ಮತದ ಕೀರ್ತಿ ಪತಾಕೆ ಅತ್ಯಂತ ಉತ್ತುಂಗಕ್ಕೆ ಏರಿತು. ಇವರಲ್ಲಿ ಶೇಖ್‌ಸಾದಿ, ಅತ್ತಾರ್, ಜಲಾಲುದ್ದೀನ್ ರೂಮಿ ಮೊದಲಾದವರು ಪ್ರಮುಖರು. ಇವರ ಕಾವ್ಯದ ಮೂಲಕ ಸೂಫೀಧರ್ಮದ ಗೌರವ ಎಲ್ಲಾ ಕಡೆಗೂ ಹಬ್ಬಿತು.

**ಆಧುನಿಕ ಯುಗ:** ಈ ಯುಗದಲ್ಲಿ ಸೂಫೀಧರ್ಮದ ಪತನದ ಯುಗವೆನ್ನಬೇಕು. ಇವರು ಸೂಫೀ ಶಬ್ದವನ್ನು ಅಪಾರ್ಥದಲ್ಲಿ ಬಳಸತೊಡಗಿದರು. ಅಶ್ಲೀಲ ಶೃಂಗಾರದಲ್ಲಿ ಕವಿತೆಗಳನ್ನು ಸೂಫೀಗಳ ತಲೆಗೆ ಕಟ್ಟಲಾಯಿತು. ಭಾರತದಲ್ಲಿ ಸಿಂಧೂ ದೇಶದ ಪತನದ ನಂತರ ಸೂಫೀ ಮತದ ಪ್ರಚಾರವಾಯಿತು.

ಈ ನಾಲ್ಕು ಮುಖ್ಯ ಸಂಪ್ರದಾಯಗಳು ಈ ಮತದ ಪ್ರಚಾರವನ್ನು ಮಾಡಿದವು. ಚಿಸ್ತಿಯಾ, ಸುಹರ್ ವರ್ದಿಯಾ, ಕಾರಿದಿಯಾ ಹಾಗೂ ನಕಶ್ ಬಂದಿಯಾ ಸಂಪ್ರದಾಯಗಳು. 'ಹಜ್ರತ್ ದಾತಾ ಗಂಜ್' ಎಂಬವನು ಭಾರತದಲ್ಲಿ ಮೊತ್ತಮೊದಲು ಸೂಫೀ ಮತವನ್ನು ಪ್ರಚಾರ ಮಾಡಿದನು. ಇವನು ಭಾರತಕ್ಕೆ ಒಬ್ಬ ಖೈದಿಯಾಗಿ ಬಂದನು. ನಂತರ ಇವನು ಸೂಫೀಗಳಲ್ಲೆಲ್ಲ ಆದ್ಯನೆಂದು ಪ್ರಖ್ಯಾತನಾದನು.

ಈ ಸೂಫೀಗಳು ಕಠೋರರಲ್ಲ, ಧರ್ಮಾಂಧರಲ್ಲ. ಹಿಂದೂ ಧರ್ಮವನ್ನು ಸಹಾನುಭೂತಿಯಿಂದ ನೋಡಿ, ಅದರಿಂದ ಅನೇಕ ವಿಷಯಗಳನ್ನು ತಿಳಿದುಕೊಂಡು, ಅದರ ಮೂಲಕವೇ ತಮ್ಮ ಧರ್ಮದ ಪ್ರಚಾರ ಮಾಡಿದರು. ಹೃದಯ ಶುದ್ಧಿ, ಆಚರಣೆಯಲ್ಲಿ ಪಾವಿತ್ರ್ಯ, ಅಪಾರ ದೈವೀಶ್ರದ್ಧೆ, ಪಾರಸ್ಪರಿಕ ಸಹಾನು ಭೂತಿ, ವಿಶ್ವಭ್ರಾತೃತ್ವ ಮತ್ತು ವಿಶ್ವಪ್ರೇಮ ಇವರ ವೈಶಿಷ್ಟ್ಯ.

ದೇವರ ಬಗೆಗೆ ಸೂಫೀಗಳು ಏಕೀಶ್ವರವಾದಿಗಳು. ಕಣ್ಣಿಗೆ ಕಾಣುವ ಜಗತ್ತಿನಲ್ಲಿ ಎಲ್ಲೆಲ್ಲೂ ಆತನಿದ್ದಾನೆ ಎಂಬ ನಂಬಿಕೆ ಅವರದು.

ಇಡೀ ಜಗತ್ತೇ ಆತನಲ್ಲಿ ಒಂದಾಗಿದೆ. ಈ ದೇವರು ಪರಮ ಸತ್ಯ, ಅಷ್ಟೇ ಅಲ್ಲ ಪರಮ ಕಲ್ಯಾಣಕಾರಕ. ಪರಮ ಸುಂದರ, ಸೂಫೀಗಳ ಪ್ರಕಾರ ಅಹಂಕಾರದ ಜಯ ಮತ್ತು ಗುರಿಸಾಧನೆಗೆ ಪ್ರೇಮವೇ ಏಕಮಾತ್ರ ಸಾಧನ. ಪರಮಾತ್ಮನನ್ನು ಪಡೆಯಲು ಇರುವ ಸಾಧನಾ ಮಾರ್ಗಗಳಲ್ಲೆಲ್ಲ ಪ್ರೇಮವೇ ಮಿಗಿಲಾದುದು.

ಸೂಫೀಗಳೂ ಈ ಆಧ್ಯಾತ್ಮಿಕ ಪ್ರೇಮವನ್ನು ಒಂದು ಯಾತ್ರೆ ಎಂದು ಪರಿಗಣಿಸುತ್ತಾರೆ. ಈ ಯಾತ್ರೆಯ ನಾಲ್ಕು ಮೆಟ್ಟಿಲುಗಳು ಈ ಕೆಳಗಿನಂತಿವೆ:

೧) ಶರೀ ಅತ್:- ಧರ್ಮ ಗ್ರಂಥಗಳ ವಿಧಿ ನಿಷೇಧಗಳನ್ನು ಪೂರ್ಣವಾಗಿ ಪಾಲಿಸುವುದು.

೨) ಹಕೀಕತ್:- ಭಕ್ತಿ ಮತ್ತು ಸಾಧನೆಯ ಸಮನ್ವಯದಿಂದಾಗುವ ಸತ್ಯದ ಅನುಭವ.

೩) ತರೀಕತ್:- ಬಾಹ್ಯಕ್ರಿಯೆ ಮತ್ತು ಆಡಂಬರಗಳಿಂದ ಮುಕ್ತನಾಗಿ ಹೃದಯ ಶುದ್ಧಿಯನ್ನು ಸಾಧಿಸಿ ಈಶ್ವರೋನ್ಮುಖನಾಗುವುದು.

೪) ಮಾರಿಫತ್:- ಇದು ಪೂರ್ಣಸಿದ್ಧಾವಸ್ಥೆ. ಇಲ್ಲಿ ಸಾಧಕ ಸಾಧ್ಯ ಬ್ರಹ್ಮನಲ್ಲಿ ಲೀನನಾಗುತ್ತಾನೆ. ಈ ರೀತಿ ಅವನು ಬ್ರಹ್ಮನಲ್ಲಿ ಐಕ್ಯನಾಗಿ 'ಅನಲ್‌ಹಕ್' ಎಂಬ ಸ್ಥಿತಿಯನ್ನು ತಲುಪುತ್ತಾನೆ.

ಸೂಫೀಗಳು ಪ್ರೇಮಯೋಗಿಗಳು. ಅವರ ವ್ಯಾಪಾರ ತ್ಯಾಗದಿಂದ ಹೆಚ್ಚುತ್ತದೆ. ಸಂಗ್ರಹದಿಂದ ಕುಗ್ಗುತ್ತದೆ. ಅವರ ಬಳಿ ವೇದನೆಯ ಅಮೂಲ್ಯ ರತ್ನವಿದೆ. ಈ ಪ್ರೇಮವನ್ನು ಗಳಿಸಬೇಕಾದರೆ ವಿರಹದ ಕುಲುಮೆಯಲ್ಲಿ ಬೇಯಬೇಕಾಗುತ್ತದೆ. ಈ ವೇದನೆಯ ಸಂಜೀವನಿಯನ್ನು ಓಡಿದು ತಂದು ಅದನ್ನು ಜನಕ್ಕೆ ಹಂಚಿದವರು ಹಿಂದಿಯ ಸೂಫೀಗಳು.

**ಪ್ರೇಮಾಶ್ರಯೀ ಶಾಖೆಯ ವೈಶಿಷ್ಟ್ಯಗಳು**

೧) ಪ್ರೇಮಾಶ್ರಯೀ ಶಾಖೆಯ ಕವಿಗಳಲ್ಲಿ ಹೆಚ್ಚಿನವರು ಮುಸಲ್ಮಾನ ಸೂಫೀಗಳು. ಹಿಂದೂ ಧರ್ಮ ಮತ್ತು ಸಿದ್ಧಾಂತಗಳಲ್ಲಿ ಇವರ ಪರಿಶ್ರಮವಿದೆ.

೨) ಜನರಲ್ಲಿ ಪ್ರಚಲಿತವಾಗಿದ್ದ ಕಥೆಗಳು ಮತ್ತು ಐತಿಹಾಸಿಕ ಕಥೆಗಳಿಗೆ ಕಲ್ಪನೆಯನ್ನು ಸೇರಿಸಿ ಇವರು ತಮ್ಮ ಕಥಾನಕಗಳನ್ನು ಹೆಣೆದಿದ್ದಾರೆ. ಹಿಂದೂ ಆಖ್ಯಾನಗಳನ್ನು ರೂಪಕ ಶೈಲಿಯಲ್ಲಿ ವರ್ಣಿಸಿ ಸೂಫೀತತ್ವವನ್ನು ಇವರ ಜನರ ಮುಂದಿಟ್ಟರು. ಕಥನಗಳ ಪಾತ್ರ, ಆದರ್ಶ, ದೇವಿ-ದೇವತೆಗಳು ಎಲ್ಲರೂ ಹಿಂದೂಗಳು. ಅಂತರಾರ್ಥವನ್ನು ಬಿಟ್ಟರೆ ಲೇಖಕ ಮುಸಲ್ಮಾನ ಎನ್ನುವುದೂ ಗೊತ್ತಾಗುವುದಿಲ್ಲ.

೩) ಈ ಕಾವ್ಯಗಳು ಭಾರತೀಯ ಮಹಾಕಾವ್ಯಗಳ ಪದ್ಧತಿಯಂತೆ ಸರ್ಗಬದ್ಧವಾಗಿರದೆ 'ಮಸ್ನವೀ' ಶೈಲಿಯಲ್ಲಿವೆ.

೪) ಕಾವ್ಯದ ಆರಂಭದಲ್ಲಿ ದೇವತಾ ವಂದನೆ, ಪೈಗಂಬರನ ಸ್ತುತಿ ಮತ್ತು ಆ ಕಾಲದ ರಾಜನ ಸ್ತುತಿ ಇರುತ್ತದೆ.

೫) ಇವರ ಕಾವ್ಯಗಳು ಅವಧೀ ಭಾಷೆಯಲ್ಲಿ ಮತ್ತು ದೋಹಾ ಚೌಪಾಯಿಯ ಶೈಲಿಯಲ್ಲಿವೆ.

೬) ಈ ಕಾವ್ಯಗಳ ಪ್ರಧಾನ ರಸ ಶೃಂಗಾರ. ಅದರಲ್ಲೂ ವಿಪ್ರಲಂಭ ಶೃಂಗಾರಕ್ಕೆ ಹೆಚ್ಚಿನ ಪ್ರಾಧಾನ್ಯ.

೭) ಸೂಫೀ ಕವಿಗಳು ಸಾಧನಾಮಾರ್ಗ ಮತ್ತು ದೈವೀ ಪ್ರೇಮದಲ್ಲಿ ಮಾಯೆಯ ಅಸ್ತಿತ್ವವನ್ನು ಒಪ್ಪಲಿಲ್ಲ. ಬದಲಾಗಿ ಸೈತಾನ ಬಾಧಕ ಎಂದು ಚಿತ್ರಿಸಿದ್ದಾರೆ.

೮) ಜ್ಞಾನಾಶ್ರಯೀ ಶಾಖೆ ವೈಯಕ್ತಿಕತೆಯಿಂದಾಗಿ ಲೋಕಪಕ್ಷವನ್ನು ಕಡೆಗಣಿಸಿತು. ಆದರೆ ಪ್ರೇಮಾಶ್ರಯೀ ಕವಿಗಳು ಲೋಕ ಪಕ್ಷ ಮತ್ತು ಆಧ್ಯಾತ್ಮ ಪಕ್ಷದ ಗೂಢತೆ, ಗಾಂಭೀರ್ಯ ಮತ್ತು ಸರಸತೆಯನ್ನು ಚೆನ್ನಾಗಿ ಚಿತ್ರಿಸಿದ್ದಾರೆ.

೯) ಈ ಶಾಖೆಯ ಎಲ್ಲಾ ಕೃತಿಗಳೂ ದೈವೀ ಪ್ರೇಮದ ಪ್ರತೀಕಗಳು. ಅಂದರೆ ಲೌಕಿಕ ಪ್ರೇಮದ ಮೂಲಕ ಅಲೌಕಿಕ ಪ್ರೇಮದ ವ್ಯಂಜನೆಯಿದೆ. ಹಾಗಾಗಿ ನಾವು ಇವುಗಳನ್ನು ಅನ್ಯೋಕ್ತಿ ಕಾವ್ಯಗಳೆನ್ನಬಹುದು. ಇವರ ಪ್ರಕಾರ ಇಡೀ ಜಗತ್ತು ಯಾವುದೋ ಒಂದು ರಹಸ್ಯಮಯ ಪ್ರೇಮ ಸೂತ್ರದಲ್ಲಿ ಬೆಸೆದುಕೊಂಡಿದೆ. ಅದನ್ನು ಅವಲಂಬಿಸಿ ಜೀವ ಆ ಪರಮ ಪ್ರೇಮಮೂರ್ತಿಯನ್ನು ಹೊಂದಬಹುದು.

೧೦) ಈ ಶಾಖೆಯ ಕವಿಗಳು ಹೆಚ್ಚಾಗಿ ಪ್ರಬಂಧ ಕಾವ್ಯಗಳನ್ನು ಬರೆದಿದ್ದಾರೆ.

೧೧) ಈ ಶಾಖೆಯ ಕವಿಗಳು ಆತ್ಮಪತಿ ಪರಮಾತ್ಮ ಸತಿ ಎಂಬ ಭಾವನೆಯಿಂದ ಪರಮಾತ್ಮನ ಉಪಾಸನೆ ಮಾಡುತ್ತಾರೆ. ಪರಮಾತ್ಮನ ವಿರಹ ಸೂಫೀಗಳಲ್ಲಿ ಭಕ್ತನ ಬಹುದೊಡ್ಡ ನಿಧಿ. ಅದಿಲ್ಲದೆ ಅವನ ಒಳಗಣ್ಣು ತೆರೆಯದು, ಸಾಧನೆ ಮುಂದುವರಿಯದು.

೧೨) ಇವರು ಜ್ಞಾನಾಶ್ರಯೀ ಶಾಖೆಯ ಕವಿಗಳಂತೆ ಹಿಂದೂ ಮುಸಲ್ಮಾನರ ಖಂಡನೆ ಮಂಡನೆಗೆ ತೊಡಗದೆ ಮಾನವನ ಮನಸ್ಸನ್ನು ತಟ್ಟುವ ಪ್ರೇಮದ ಮಧುರವೂ ಕೋಮಲವೂ ಆದ ವೃತ್ತಿಯನ್ನೇ ಆಶ್ರಯಿಸಿದ್ದಾರೆ.

ಕುತ್ಬನ್, ಮಂಝುನ್, ಜಾಯಸಿ, ಉಸ್ಮಾನ ಮೊದಲಾದವರು ಪ್ರಮುಖ ಸೂಫೀಕವಿಗಳಾಗಿದ್ದರು.

ಪ್ರೇಮಾಶ್ರಯೀ ಶಾಖೆಯ ಕವಿಗಳು ಮಾನವನ ಹೃದಯವನ್ನು ಮುಟ್ಟುವ ಪ್ರೇಮದ ಮಧುರ ಕೋಮಲ ವೃತ್ತಿಯನ್ನು ಆಶ್ರಯಿಸಿದರು. ಇವರು ಸಂತರಂತೆ ಖಂಡನೆ ಮಂಡನೆಗೆ ಹೋಗಲಿಲ್ಲ.

ಆದ್ದರಿಂದ ಇವರ ಕಾವ್ಯ ಹೆಚ್ಚು ಜನಪ್ರಿಯವಾಗಬೇಕಿತ್ತು. ಆದರೆ ಅದು ಸಗುಣ ಭಕ್ತಿಧಾರೆಯ ಎದುರು ನಿಲ್ಲಲಾರದೆ ಹೋಯಿತು. ಇವರ ಪ್ರೇಮಕಾವ್ಯಗಳ ಆಲಂಬನ ರಾಮ, ಕೃಷ್ಣರಷ್ಟು ಲೋಕಪ್ರಿಯವಾಗಲಿಲ್ಲ. ಲೌಕಿಕ ಪ್ರೇಮಾವೇನೋ ಎಲ್ಲರಿಗೂ ಬೇಕು. ಆದರೆ ಸಗುಣ ಭಕ್ತಿಯಲ್ಲಿ ಧರ್ಮ ಮತ್ತು ಪ್ರೇಮ ಎರಡೂ ಸಮ್ಮಿಳಿತವಾಗಿದ್ದವು. ಹೀಗಾಗಿ ರಾಮ, ಕೃಷ್ಣರ ಲೀಲೆ

ಜನರನ್ನು ಆಕರ್ಷಸಿದಷ್ಟು ಈ ಪ್ರೇಮ ಕಾವ್ಯಗಳು ಆಕರ್ಷಿಸಲಿಲ್ಲ. ರಾಮ, ಕೃಷ್ಣರ ಕಥೆಗಳಲ್ಲಿ ದುಃಖವನ್ನು ದೂರಮಾಡುವ ಸಾಮರ್ಥ್ಯವಿದ್ದಿತು. ಆದ್ದರಿಂದ ಇದು ಅತ್ಯಂತ ಜನಪ್ರಿಯವಾಯಿತು.

**ಸಗುಣಧಾರೆ**

**ರಾಮಭಕ್ತಿ ಶಾಖೆ**

ಭಕ್ತಿ ದ್ರಾವಿಡ ದೇಶದಲ್ಲಿ ಆರಂಭವಾಯಿತು ಎಂಬುದು ಎಲ್ಲರಿಗೂ ತಿಳಿದ ವಿಷಯ. ಅಲ್ಲಿ ಆಳ್ವಾರ್, ನಾಯನ್ಮಾರ್ ಭಕ್ತರು ಹಾಗೂ ರಾಮಾನುಜರು ಭಕ್ತಿಗೆ ಭದ್ರವಾದ ಬುನಾದಿಯನ್ನು ಹಾಕಿದರು. ಭಕ್ತಿಯ ಬೆಳವಣಿಗೆಗೆ ರಾಮಾನುಜರ ಕೊಡುಗೆ ಅಪಾರವಾದುದು. ಅವರು ಅತ್ಯಂತ ಶ್ರೇಷ್ಠ ಹಾಗೂ ಉದಾರೀ ಆಚಾರ್ಯರು. ವಿಶಿಷ್ಟಾದ್ವೈತದ ಪ್ರಕಾರ ಚಿದಚಿದ್ವಿಶಿಷ್ಟವಾದ ಈ ಜಗತ್ತಿನಲ್ಲಿ ಎಲ್ಲರೂ ಪರಬ್ರಹ್ಮನ ಅಂಶಗಳು. ಎಲ್ಲವೂ ಅವನಿಂದಲೇ ಜನಿಸುತ್ತವೆ. ಅವನಲ್ಲೇ ಲೀನವಾಗುತ್ತವೆ. ಆದ್ದರಿಂದ ಈ ಜೀವಗಳು ಉದ್ಧಾರವಾಗಬೇಕಾದರೆ ಭಕ್ತಿಯ ಮೂಲಕ ಆತನ ಸಾಮೀಪ್ಯ ಪಡೆಯಲು ಯತ್ನಿಸಬೇಕು. ರಾಮಾನುಜರು ಈ ರೀತಿ ಭಕ್ತಿಗೆ ಪ್ರಮುಖ ಸ್ಥಾನವಿತ್ತರು. ಅವರ ಈ ಭಕ್ತಿ ಪಂಥ ಎಲ್ಲ ಕಡೆಗೂ ಹರಡಿತು. ರಾಮಾನುಜ ಸಂಪ್ರದಾಯದಲ್ಲಿ ವಿಷ್ಣು ಅಥವಾ ಶ್ರೀಮನ್ನಾರಾಯಣ ಆರಾಧ್ಯ ದೈವ. ಈ ನಾರಾಯಣೋಪಾಸನೆ ದೇಶದೆಲ್ಲೆಡೆ ಹಬ್ಬಿತು. ಕ್ರಿ.ಶ.೧೪ನೇ ಶತಮಾನದ ಆರಂಭದಲ್ಲಿ ಶ್ರೀ ವೈಷ್ಣವ ಸಂಪ್ರದಾಯದ ಪ್ರಧಾನ ಆಚಾರ್ಯರಾದ ಶ್ರೀ ರಾಘವಾನಂದರು ಕಾಶಿಯಲ್ಲಿ ನೆಲೆಸಿದ್ದರು. ಅವರಿಗೆ ಸರಿಯಾದ ಉತ್ತರಾಧಿಕಾರಿ ಇಲ್ಲದೆ ಬಹಳ ಚಿಂತೆಯಾಯಿತಂತೆ ಕೊನೆಗೆ ರಾಮಾನಂದರಿಗೆ ಅವರು ದೀಕ್ಷೆಕೊಟ್ಟು ದೈವಾಧೀನರಾದರು. ರಾಮಾನಂದರು ದೇಶಾದ್ಯಂತ ಸುತ್ತಿ ಧರ್ಮ ಪ್ರಚಾರ ಮಾಡಿದರು (ಡಾ. ಎಂ. ಎಸ್. ಕೃಷ್ಣ ಮೂರ್ತಿ ೧೯೭೬)

**ರಾಮಭಕ್ತಿ ಶಾಖೆಯ ವೈಶಿಷ್ಟ್ಯಗಳು**

೧) ಈ ಶಾಖೆಯಲ್ಲಿ ಜ್ಞಾನಯೋಗ ಹಾಗೂ ಕರ್ಮಯೋಗಕ್ಕಿಂತ ಸಗುಣ ಭಕ್ತಿಯೇ ಶ್ರೇಷ್ಠ ಮತ್ತು ಗ್ರಾಹ್ಯ. ಇವರು ವರ್ಣಾಶ್ರಮ ಧರ್ಮವನ್ನು ಪುನಃ ಪ್ರತಿಷ್ಠಾಪಿಸಿದರು.

೨) ಸಮನ್ವಯ ಪ್ರವೃತ್ತಿ ಈ ಶಾಖೆಯ ಪ್ರಮುಖ ಗುಣ. ಹರಿಹರರ ಜ್ಞಾನ, ಭಕ್ತಿ ಹಾಗೂ ಕರ್ಮದ ಸಾಹಿತ್ಯದಲ್ಲಿ ಜನಭಾಷೆ ಮತ್ತು ಸಂಸ್ಕೃತದ ಸಮನ್ವಯ ಕಂಡು ಬರುತ್ತದೆ.

೩) ಈ ಶಾಖೆಯ ಭಕ್ತಿ ಸೇವ್ಯ-ಸೇವಕ ಅಂದರೆ ದಾಸ್ಯ ಭಕ್ತಿ.

೪) ಈ ಶಾಖೆಯ ಆರಾಧ್ಯ ದೈವ ರಾಮ.

೫) ಪ್ರಬಂಧ, ಮುಕ್ತಕ, ಗೇಯ ಕಾವ್ಯ, ಕವಿತ್ರ, ಸವೈಯಾ, ದೋಹಾ, ಚೌಪಾಯಿ ಈ ರೀತಿ ಎಲ್ಲ ಛಂದಸ್ಸನ್ನು ಈ ಕವಿಗಳು ಯಶಸ್ವಿಯಾಗಿ ಬಳಸಿದ್ದಾರೆ.

೬) ರಾಮಭಕ್ತ ಕವಿಗಳು ಅವಧೀ ಹಾಗೂ ಬ್ರಜ ಭಾಷೆಗಳಲ್ಲಿ ಕಾವ್ಯ ರಚನೆ ಮಾಡಿದ್ದಾರೆ.

೭) ರಾಮಭಕ್ತಿಯ ಜೊತೆಗೆ ಈ ಸಮಯದಲ್ಲಿ ಹನುಮದ್ಭಕ್ತಿಯೂ ಇತ್ತು.

ತುಲಸೀದಾಸ, ಸ್ವಾಮಿ ಅಗ್ರದಾಸ, ನಾಭಾದಾಸ, ಹೃದಯರಾಮ, ಪ್ರಾಣಚಂದ ಚೌಹಾನ್, ಕೇಶವದಾಸ ಮೊದಲಾದವರು ಪ್ರಮುಖ ರಾಮಭಕ್ತ ಕವಿಗಳು.

ರಾಮಭಕ್ತಿ ಸಾಹಿತ್ಯ ಸಾಮಾಜಿಕ ಕಟ್ಟುಪಾಡುಗಳ ರಕ್ಷಣೆಯ ಸಾಹಿತ್ಯ, ಅದರ ಭಕ್ತಿಯ ಸ್ವರೂಪ ಸಹ ಸಾಮಾಜಿಕ ವಿಧಿನಿಷೇಧಗಳ ಚೌಕಟ್ಟಿನಲ್ಲಿರುವಂಥದು.

**ಕೃಷ್ಣ ಭಕ್ತಿ ಶಾಖೆ**

**ವಿವಿಧ ಸಂಪ್ರದಾಯಗಳು**

ಕಬೀರ ಮೊದಲಾದ ಸಂತರು 'ಸತ್ಯ'ದತ್ತ ಒಲವು ತೋರಿದ್ದರೆ ತುಲಸಿದಾಸ ಮೊದಲಾದವರು ಸಮಾಜದ 'ಶಿವ'ದತ್ತ ಹೆಚ್ಚು ಒಲವು ತೋರಿದರು. ಆದರೆ ಕೃಷ್ಣ ಭಕ್ತ ಕವಿಗಳು 'ಸುಂದರ'ದ ಕಡೆಗೆ ಒಲವು ತೋರಿದರು. ಈ ರೀತಿ ಭಕ್ತಿಕಾಲದಲ್ಲಿ ಸತ್ಯಂ, ಶಿವಂ, ಸುಂದರಂಗಳ ತ್ರೀವೇಣೀ ಸಂಗಮವಾಯಿತು. ಸೌಂದರ್ಯದ ಪೂಜಾರಿಗಳಿಗೆ ಕೃಷ್ಣನೇ ಮುಖ್ಯನಾದ. ಹೀಗೆ ಕೃಷ್ಣನನ್ನೇ ಪರಬ್ರಹ್ಮನೆಂದು ಆರಾಧಿಸುವ ಸಂಪ್ರದಾಯವೊಂದು ಹಿಂದೀ ಪ್ರದೇಶದಲ್ಲಿ ಅದರಲ್ಲೂ ಕೃಷ್ಣನ ಜನ್ಮಭೂಮಿಯಲ್ಲೇ ಹುಟ್ಟಿಕೊಂಡಿತು.

ದಕ್ಷಿಣದವರಾದ ವಲ್ಲಾಭಾಚಾರ್ಯರು ಈ ಸಂಪ್ರದಾಯದ ಪ್ರವರ್ತಕರು. ಅವರು ಕೃಷ್ಣನ ಲೀಲೆಗೆ ಹೆಚ್ಚಿನ ಮಹತ್ವವನ್ನು ನೀಡಿದರು. ಹಾಗಾಗಿ ಈ ಸಂಪ್ರದಾಯದಲ್ಲಿ ಭಕ್ತರು ದೇವರ ಧರ್ಮರಕ್ಷಕ, ದುಷ್ಟದಮನ ರೂಪವನ್ನು ಮರೆಮಾಚಿ ಆತನ ಪ್ರೇಮಮಯ ರೂಪವನ್ನೇ ಸ್ವೀಕರಿಸಿದರು. ಬಂಗಾಳದ ಚೈತನ್ಯ ಮಹಾಪ್ರಭುವಿನ ಅನುಯಾಯಿಗಳೂ ಕೂಡ ವೃಂದಾವನವನ್ನು ತಮ್ಮ ಸಾಧನಾ ಕ್ಷೇತ್ರವನ್ನಾಗಿ ಮಾಡಿಕೊಂಡಿದ್ದರು. ಆದರೆ ಮುಖ್ಯವಾಗಿ ಈ ಗೌಡೀಯ ವೈಷ್ಣವರಲ್ಲಿ ಉಪಾಸನಾ ಭಾವ ವಿಷ್ಣುಲ ಆರಾಧನೆಯ ರೂಪದಲ್ಲಿ ವ್ಯಕ್ತವಾಯಿತು. ಇವರು ಗೋಪೀ ಭಾವದಿಂದ

ಶ್ರೀಕೃಷ್ಣನನ್ನು ಆರಾಧಿಸುತ್ತಾರೆ. ಓಂದೀ ಜನತೆಯ ಮೇಲೂ ಇವರ ಪ್ರಭಾವ ಬಿದ್ದಿತು. ಚೈತನ್ಯರ ಶಿಷ್ಯರಲ್ಲಿ ಪ್ರಮುಖರಾದ ನಿತ್ಯಾನಂದರ ಪತ್ನಿ ಜಾಹ್ನವೀ ದೇವಿಯ ಪ್ರೇರಣೆಯಿಂದ ವೃಂದಾವನದಲ್ಲಿ ಕೃಷ್ಣನ ವಿಗ್ರಹದ ಜೊತೆಗೆ ರಾಧೆಯ ವಿಗ್ರಹವನ್ನೂ ಪ್ರತಿಷ್ಠಾಪಿಸಲಾಯಿತಂತೆ. ಅಂದಿನಿಂದ ಕೃಷ್ಣನ ಜೊತೆಗೆ ರಾಧೆಯ ಪೂಜೆಯೂ ಪ್ರಚಲಿತವಾಯಿತು.

ಇವುಗಳಲ್ಲದೇ ಕೃಷ್ಣನನ್ನೇ ಪರಬ್ರಹ್ಮನೆಂದು ಆರಾಧಿಸುವ ಇನ್ನೂ ಹಲವು ಸಂಪ್ರದಾಯಗಳಿವೆ. ರಾಧಾವಲ್ಲಭೀಯ ಸಂಪ್ರದಾಯ ಮತ್ತು ನಿಂಬಾರ್ಕ ಸಂಪ್ರದಾಯ ಅವುಗಳಲ್ಲಿ ಮುಖ್ಯವಾದವು. ಹಿತಹರಿವಂಶ, ಹರಿರಾಮ ವ್ಯಾಸ ಮತ್ತು ಧ್ರುವದಾಸ ಮೊದಲಾದವರು ರಾಧಾವಲ್ಲಭೀಯ ಸಂಪ್ರದಾಯಸ್ಥರು. ಇವರ ಪ್ರಕಾರ ರಾಧಾಕೃಷ್ಣರ ಯುಗಳ ಮೂರ್ತಿಯ ಭಕ್ತಿ ಆದರ್ಶ ಭಕ್ತಿ. ಇವರು ರಾಧಾಕೃಷ್ಣರ ವಿಶುದ್ಧ ಶೃಂಗಾರವನ್ನು ಸರಸವಾಗಿ ಬಣ್ಣಿಸಿದ್ದಾರೆ. ರಾಧೆಗೆ ಇವರು ಕೃಷ್ಣನಿಗಿಂತ ಹೆಚ್ಚಿನ ಮಹತ್ವವನ್ನು ನೀಡಿದ್ದಾರೆ.

ಹರಿದಾಸ ಮತ್ತು ಶ್ರೀ ಭಟ್ಟರು ನಿಂಬಾರ್ಕ ಮತಾನುಯಾಯಿಗಳಲ್ಲಿ ಪ್ರಮುಖರು. ಇವರ ಆರಾಧ್ಯದೇವ ಪ್ರಕೃತಿ ರೂಪಿಣಿಯಾದ ರಾಧೆಯ ಸಮೇತ ಇರುವ ಪರಬ್ರಹ್ಮ ಕೃಷ್ಣ. ಹರ ವಿರಂಚಿಯೇ ಮೊದಲಾದ ದೇವತೆಗಳೂ ಸಹ ಕೃಷ್ಣನನ್ನು ಪೂಜಿಸುತ್ತಾರೆ. ಜೀವಗಳೆಲ್ಲ ಅವನ ಆಶ್ರಿತ. ಆತನ ನಿವಾಸ, ಸ್ವರೂಪ, ಕೃಪೆ ಹಾಗೂ ಪ್ರಮೋದವನ್ನು ಅರಿತು ಅವನಿಗೆ ಶರಣಾಗುವ ಭಕ್ತರಿಗೆ ಕೃಷ್ಣ ಭಕ್ತಿ ದೊರೆಯುತ್ತದೆ.

ಆದರೆ ಹಿಂದಿಯಲ್ಲಿ ತೃಣ ಭಕ್ತಿಯನ್ನು ವಲ್ಲಭಾಚಾರ್ಯರು ಅತಿಶಯವಾಗಿ ಪ್ರಚಾರ ಮಾಡಿದರು. ಅವರ ಪ್ರಭಾವಲಯದ ಮುಂದೆ ಬಾಕಿಯೆಲ್ಲ ಗೌಣ.

**ಕೃಷ್ಣ ಭಕ್ತಿ ಶಾಖೆಯ ವೈಶಿಷ್ಟ್ಯಗಳು**

೧) ಈ ಭಕ್ತಿಯ ಸಾಹಿತ್ಯವೆಲ್ಲ ಕೃಷ್ಣನ ಜನ್ಮಭೂಮಿಯ ಭಾಷೆಯಾದ ಬ್ರಜಭಾಷೆಯಲ್ಲಿ ರಚಿತವಾಗಿದೆ.

೨) ಈ ಶಾಖೆಯ ಕವಿಗಳಲ್ಲಿ ಮಾಧುರ್ಯ, ಸಖ್ಯ ಮತ್ತು ವಾತ್ಸಲ್ಯ ಭಕ್ತಿಯ ಭಾವ ಪ್ರಧಾನವಾದುದು.

೩) ಕೃಷ್ಣ ಭಕ್ತಿ ಕಾವ್ಯದಲ್ಲಿ ಶೃಂಗಾರ ಮತ್ತು ವಾತ್ಸಲ್ಯ ಪ್ರಮುಖ ರಸಗಳು

೪) ಇಲ್ಲಿ ಪ್ರಬಂಧ ಕಾವ್ಯಕ್ಕಿಂತ ಗೇಯ ಕಾವ್ಯಕ್ಕೆ ಹೆಚ್ಚಿನ ಪ್ರಾಧ್ಯಾನ್ಯ ನೀಡಲಾಗಿದೆ.

೫) ಕೃಷ್ಣ ಭಕ್ತಿ ಸಾಹಿತ್ಯದಲ್ಲಿ ಕೃಷ್ಣನ ಲೋಕರಂಜಕ ರೂಪಕ್ಕೇ ಹೆಚ್ಚಿನ ಮಹತ್ವ, ಲೋಕ ರಕ್ಷಕ ರೂಪ ಇಲ್ಲವೆಂದರೂ ಸಲ್ಲುತ್ತದೆ. ಗೀತಾಚಾರ್ಯನೂ, ಪಾಂಚಜನ್ಯ ಪಾಣಿಯೂ ಆದ ಕೃಷ್ಣ ಹಿಂದಿಯಲ್ಲಿಲ್ಲ.

೬) ಕೃಷ್ಣ ಭಕ್ತ ಕವಿಗಳು 'ಭ್ರಮರ ಗೀತ' ಎಂಬ ಸಂದೇಶ ಕಾವ್ಯ ಪರಂಪರೆಯನ್ನು ಸೃಷ್ಟಿಸಿ ಬೆಳೆಸಿದರು.

೭) ಸಾಹಿತ್ಯ ಮತ್ತು ಸಂಗೀತಗಳ ಹೃದಯಂಗಮ ಸಂಗಮ, ಭಾಷಾ ಮಾಧುರಿ, ಭಾವ ಸೌಕುಮಾರ್ಯ ಪ್ರಧಾನ

೮) ರಾಸಕ್ರೀಡೆಯ ವರ್ಣನೆಯ ಸಂದರ್ಭದಲ್ಲಿ ಋತುವರ್ಣನೆ, ರೂಪವರ್ಣನೆಯಲ್ಲಿ 'ನಖಶಿಖ' ವರ್ಣನೆ ಬರುತ್ತದೆ.

ಸೂರದಾಸ, ನಂದದಾಸ, ಕುಂಭನದಾಸ, ಚತುರ್ಭುಜದಾಸ, ಛೀತಸ್ವಾಮಿ, ಗೋವಿಂದ ಸ್ವಾಮಿ, ಗದಾಧರ ಭಟ್ಟ, ಮೀರಾಬಾಯಿ, ಸ್ವಾಮಿ ಹರಿದಾಸ, ರಸಖಾನ್ ಮೊದಲಾದವರು ಪ್ರಮುಖ ಕೃಷ್ಣ ಭಕ್ತ ಕವಿಗಳು.

**ಸಂದರ್ಭ ಸೂಚಿ**

**೧. ಬಸವರಾಜ ಕಲ್ಗುಡಿ**

ಅನುಭಾವ: ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ: ೨೦೦೧ ಪುಟ ೧೯೫

**೨. ಡಾ. ಪಿ. ವಿ ನಾರಾಯಣ**

ವಚನ ಸಾಹಿತ್ಯ: ಸಾಂಸ್ಕೃತಿಕ ಅಧ್ಯಯನ (ಗದಗ) ಪುಟ ೪೪೯-೪೩೩ ೧೯೮೩

**೩. ಡಾ. ಎಂ. ಎಸ್. ಕೃಷ್ಣ ಮೂರ್ತಿ**

ಹಿಂದೀ ಸಾಹಿತ್ಯ: ೧೯೭೬, ಪುಟ ೪೬

ಹಿಂದೀ ಸಾಹಿತ್ಯ: ೧೯೭೬, ಪುಟ ೬೪

ಹಿಂದೀ ಸಾಹಿತ್ಯ: ೧೯೭೬, ಪುಟ ೮೨

ಅಧ್ಯಾಯ ೩

# ಅಕ್ಕಮಹಾದೇವಿ ಮತ್ತು ಮೀರಾಬಾಯಿಯ

# ಕಾಲ, ದೇಶ, ಜೀವನ, ಮನೋಧರ್ಮ

- ಅಕ್ಕಮಹಾದೇವಿ: ಸಾಧನೆಯ ಹಾದಿಯಲ್ಲಿ
- ಮೀರಾಬಾಯಿ ನಡೆದ ದಾರಿ

# ಅಧ್ಯಾಯ ೩: ಅಕ್ಕಮಹಾದೇವಿ ಮತ್ತು ಮೀರಾಬಾಯಿಯ ಕಾಲ, ದೇಶ, ಜೀವನ, ಮನೋಧರ್ಮ

## ಅಕ್ಕಮಹಾದೇವಿ: ಸಾಧನೆಯ ಹಾದಿಯಲ್ಲಿ

ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲಿ, ಅದರಲ್ಲೂ ೧೨ನೆಯ ಶತಮಾನದ ಶಿವಶರಣರ ವೈಚಾರಿಕ ಕ್ರಾಂತಿಯಲ್ಲಿ, ಮಿಂಚಿನಂತೆ ಮೂಡಿ, ಕೆಲ ಕಾಲದಲ್ಲಿಯೇ, ಪ್ರಜ್ವಲವಾಗಿ ಪ್ರಕಾಶಿಸಿ, ಮಾನವಕುಲಕ್ಕೆ ಮುಕುಟ ಮಣಿಯಾಗಿ ಶೋಭಿಸಿದ ಅಕ್ಕಮಹಾದೇವಿ, ಒಬ್ಬ ಅಪೂರ್ವ ಅನುಭಾವಿ. "ಮಹಾದೇವಿಯಕ್ಕನ ಜೀವನ ಚರಿತೆ; ಹೆಣ್ಣಿನ ಗೌರವ ಸಾಧನೆಯ, ಹೆಣ್ಣಿನ ಪರಮಾರ್ಥ ಸಾಧನೆಯ, ಒಂದು ಮಹಾಪ್ರಕರಣ" (ಲೇ. ಎಂ.ಆರ್. ಶ್ರೀನಿವಾಸ ಮೂರ್ತಿ ೧೯೬೮) ಲೌಕಿಕ ಸಂಸಾರವೆಂಬ ಹಗೆಗೆ ಬೆಂಗೊಡದೇ, 'ಸಾವಿಲ್ಲದ ಕೇಡಿಲ್ಲದ, ಎಡೆಯಿಲ್ಲದ, ಕಡೆಯಿಲ್ಲದ ತೆರೆಹಿಲ್ಲದ ಕುರುಹಿಲ್ಲದ ನಿಸ್ಸೀಮ ಚೆಲುವ' ಚೆನ್ನಮಲ್ಲಿಕಾರ್ಜುನನಿಗೆ ಮನ ಮಾರುಹೋಗಿ, ಕಾಯದಲ್ಲಿದ್ದು ನಿಃಕಾಯಳಾಗಿ, ನಿಜಶಕ್ತಿ ತಾನಾದವಳು ಅಕ್ಕಮಹಾದೇವಿ. 'ನಾಮದಲ್ಲಿ ಹೆಂಗುಸಾದರೂ ಭಾವಿಸಲು ಗಂಡುರೂಪು' (ಡಾ. ಎಲ್. ಬಸವರಾಜು, ೧೯೭೪ ) ಎಂದ ಕೆಚ್ಚೆದೆಯ ಸಾಹಸಜೀವಿ. ಹೆಸರಿಗೆ ಅನುರೂಪವಾಗಿಯೇ ಅಕ್ಕಮಹಾದೇವಿಯ ಬದುಕಿನ ಗುರಿ ಹಾಗೂ ಸಿದ್ಧಿಗಳು ಮಹೋನ್ನತವಾದವು. ಪ್ರಪಂಚದ ಇತಿಹಾಸದಲ್ಲಿ ಅಮೂಲ್ಯ ಉದಾಹರಣೆ ಆಕೆಯ ಜೀವನ.

ಅಕ್ಕಮಹಾದೇವಿಯನ್ನು 'ಉಡು ತಡಿಯ ಮಹಾದೇವಿ' ಎಂದೇ ಹಲವು ಕಾವ್ಯಗಳಲ್ಲಿ ಹೇಳಲಾಗಿದೆ. ಹರಿಹರನು ತನ್ನ ಕಾವ್ಯಕ್ಕೆ 'ಉಡುತಡಿಯ ಮಹಾದೇವಿಯಕ್ಕನ ರಗಳೆ' ಎಂದು ಹೆಸರಿಸಿದ್ದಾನೆ. ಇದರಿಂದ ಈಕೆ ಉಡುತಡಿಯವಳು ಎಂಬುದು ಸ್ಪಷ್ಟವಾಗುತ್ತದೆ.

ಉಡುತಡಿ ಎಂಬುದು ಮೂಲರೂಪ. ಉದತಡಿ. ಉಡುತಡಿ (ಉದರ ತಡಿ) ಇದು ಕೆರೆಯ ದಡದಲ್ಲಿರುವ ಊರು ಎಂದು ಸೂಚಿಸುತ್ತದೆ.(ಗುರುಲಿಂಗ ಕಾಪಸೆ ೧೯೭೬)

ಅಕ್ಕಮಹಾದೇವಿಯ ಊರಾದ ಉಡುತಡಿಯ ಹತ್ತಿರದಲ್ಲಿ ಅಲ್ಲಮ ಪ್ರಭುವಿನ ಬಳ್ಳಿಗಾವಿಯೂ, ಏಕಾಂತ ರಾಮಯ್ಯನ ತಾಳಗುಂದವೂ ಇದೆ. ಬಳ್ಳಿಗಾವಿ ಒಂದು ಪ್ರಾಚೀನ ಶೈವಕೇಂದ್ರವಾಗಿದೆ. ಉಡುತಡಿಯಲ್ಲಿ ಶೈವ ಪರಂಪರೆ ಮತ್ತು ಶಿವಭಕ್ತಿಯ ಪರಿಸರವಿತ್ತು. ಈ ಪರಂಪರೆಯ ವಾತಾವರಣದಲ್ಲಿ ಅಕ್ಕಮಹಾದೇವಿಯ ತಂದೆ ತಾಯಿಗಳು ತಮ್ಮ ಜೀವನವನ್ನು ರೂಪಿಸಿಕೊಂಡರು. ಹಾಗಾಗಿ ಅವರು ಶಿವಭಕ್ತರೆಂದು ಕರೆಯಲ್ಪಟ್ಟರು. ಹರಿಹರ ಕವಿಯು ಅವರ

ಅಂಕಿತನಾಮಗಳನ್ನು ಮರೆತು ಶಿವಭಕ್ತಿ, ಶಿವಭಕ್ತೆಯರೆಂದೇ ಕರೆಯಲು ಅವರ ಶಿವಭಕ್ತಿಯೇ ಮೂಲ ಕಾರಣವಾಗಿದ್ದಿರಬಹುದು.

ಚಾಮರಸ ಕವಿಯು ಈ ಶಿವಭಕ್ತ ದಂಪತಿಗಳನ್ನು ನಿರ್ಮಲ ಮತ್ತು ಸುಮತಿಯರೆಂದು ಕರೆದನು. ಈ ಹೆಸರುಗಳೂ ಕೂಡಾ ವಾಸ್ತವ ಹೆಸರುಗಳಾಗಿರದೆ ಅವರ ವ್ಯಕ್ತಿತ್ವ ವಿಶೇಷತೆಗಳನ್ನು ಸೂಚಿಸುವ ಸಂಕೇತಗಳಾಗಿರಲೂ ಬಹುದು. ಚಾಮರಸನು ಶಿವಭಕ್ತರೆನಿಸಿದ ವ್ಯಕ್ತಿಗಳಿಗೆ ಅರ್ಥಪೂರ್ಣವಾದ, ಕರೆಯಲು ಸುಲಭವಾದ ಹೆಸರುಗಳನ್ನು ಸೂಚಿಸಿದ ನಂತರ ಹರಿಹರ ಮತ್ತು ಚೆನ್ನಬಸವಾಂಕರು ಇದೇ ಹೆಸರುಗಳನ್ನು ಬಳಸಿದರು. ರಾಚಕವಿ ಮಾತ್ರ ಓಂಕಾರ ಶೆಟ್ಟಿ, ಲಿಂಗಮ್ಮ ಎಂಬ ಭಿನ್ನ ಹೆಸರುಗಳಿಂದ ಗುರುತಿಸಿದನು.

ಶಿವಭಕ್ತರಾದ ನಿರ್ಮಲ, ಸುಮತಿಯವರಿಗೆ ಬಹಳ ಸಮಯದವರೆಗೆ ಮಕ್ಕಳಾಗಲಿಲ್ಲ. ಆದುದರಿಂದ ಮಕ್ಕಳಿಗಾಗಿ ದೇವರನ್ನು ಪ್ರಾರ್ಥಿಸುತ್ತಾರೆ, ವ್ರತಗಳನ್ನು ಮಾಡುತ್ತಾರೆ. ಅವರು ಪಾರ್ವತಿಯಲ್ಲಿ 'ರೂಪಗುಣ ಸಂಪನ್ನೆಯಾದ, ಶಿವನಲ್ಲಿ ಸದ್ಭಕ್ತಿಯನ್ನು ಹೊಂದಿರುವ ಕನ್ಯೆಯನ್ನು ಕರುಣಿಸು' ಎಂದು ಪ್ರಾರ್ಥಿಸುತ್ತಾರೆ. ಈ ದಂಪತಿಗಳ ಭಕ್ತಿಗೆ ಮೆಚ್ಚಿ ಪಾರ್ವತಿ ಅವರ ಬಯಕೆಯನ್ನು ಈಡೇರಿಸಿದುದಾಗಿ ನಮ್ಮ ಕಾವ್ಯಗಳು ವರ್ಣಿಸುತ್ತವೆ. (ಗುರುಲಿಂಗ ಕಾಪಸೆ ೧೯೯೬) ಈ ರೀತಿ ಪಾರ್ವತಿಯ ಒಂದಂಶವಾಗಿ, ನಿರ್ಮಲ-ಸುಮತಿಯರ ಮಗುವಾಗಿ ಮಹಾದೇವಿ ಇಲ್ಲಿ ಹುಟ್ಟಿ ಬಂದವಳು.

ಮಹಾದೇವಿಯನ್ನು ಪಾರ್ವತಿಯ ಅಂಶವೆಂದು, ರುದ್ರ ಕನ್ಯೆಯೆಂದು ನಮ್ಮ ಕಾವ್ಯಗಳು ವರ್ಣಿಸಿರುವುದೇನೋ ನಿಜವೇ. ಆದರೆ ವಾಸ್ತವದಲ್ಲಿ ಅವಲೋಕಿಸಿದರೆ ಆಕೆ ಶಿವಭಕ್ತ ದಂಪತಿಗಳಿಗೆ ತಡವಾಗಿ ಜನಿಸಿರುವ, ಶಿವಭಕ್ತಿಯ ಫಲವಾಗಿರುವ ಮಗಳು ಎಂಬುದಂತೂ ನಿಜ. ಬಹಳ ಸಮಯದ ನಂತರ ಜನಿಸಿದ ಮಗುವಿನ ಮೇಲೆ ತಂದೆ-ತಾಯಿಗಳಿಗೆ ಅಪಾರವಾದ ಮಮತೆಯಿರುವುದು ಸಹಜ. ಅಂತೆಯೇ ಅವರು ಅವಳನ್ನು ತಮ್ಮಂತೆಯೇ ಶಿವಭಕ್ತ ಸಂಪನ್ನೆಯಾಗಿ ಬೆಳೆಯುವಂತೆ ಎಲ್ಲ ಅನುಕೂಲತೆಗಳನ್ನೂ ಕಲ್ಪಿಸಿಕೊಡುತ್ತಾರೆ. ಸಕಾಲದಲ್ಲಿ ಶೈವಾಚಾರ ಸಂಪನ್ನರಿಂದ ಶಿಕ್ಷಣ ದೊರೆಯುವಂತೆ ನೋಡಿಕೊಳ್ಳುತ್ತಾರೆ. ಹಾಗಾಗಿ ಮಹಾದೇವಿ ಅತ್ಯಂತ ಸಣ್ಣ ಪ್ರಾಯದಲ್ಲಿಯೇ ಗುರು-ಲಿಂಗ-ಜಂಗಮದಲ್ಲಿ ಶ್ರದ್ಧೆ-ನಿಷ್ಠೆಗಳನ್ನು ಬೆಳೆಸಿಕೊಳ್ಳುತ್ತಾಳೆ.

ಮಹಾದೇವಿಯ ಆಧ್ಯಾತ್ಮಿಕ ಜೀವನವನ್ನು ರೂಪಿಸುವಲ್ಲಿ ಆಕೆಯ ಗುರುಗಳು ಮಹತ್ವದ ಪಾತ್ರವಹಿಸಿರುವುದು ಆಕೆಯ ವಚನಗಳಿಂದಲೇ ಸ್ಪಷ್ಟವಾಗುತ್ತದೆ:

ಸಂಸಾರ ಸಾಗರದೊಳಗೆ ಬಿದ್ದೆ ನೋಡಾ ನಾನು,
ಸಂಸಾರ ನಿಸ್ಸಾರವೆಂದು ತೋರಿದ ನನಗೆ ಗುರು
ಲಿಂಗವಿಕಾರದ ಸಂಗನ ನಿಲಿಸಿ
ಲಿಂಗವನಂಗದ ಮೇಲೆ ಸ್ಥಾಪ್ಯವ ಮಾಡಿದನೆನ್ನ ಗುರು
ಹಿಂದಣ ಜನ್ಮವ ತೊಡೆದು,
ಮುಂದಣ ಪಥವ ತೋರಿದನೆನ್ನ ತಂದೆ
ಚೆನ್ನಮಲ್ಲಿಕಾರ್ಜುನನ ನಿಜವನರುಹಿದನೆನ್ನ ಗುರು

ಅಕ್ಕಮಹಾದೇವಿ ಈ ವಚನದಲ್ಲಿ ಗುರುವಿನ ಮಹಿಮಾ ಕಾರ್ಯಗಳ ಬಗ್ಗೆ ವಿವರಿಸಿದ್ದಾಳೆ. ಸಂಸಾರ ಸಾಗರದಲ್ಲಿ ನಾನು ಬಿದ್ದೆನು, ಸಂಸಾರವು ಸಾರವಿಲ್ಲದ್ದೆಂದು ಎನಗೆ ಸದ್ಗುರುವು ತೋರಿಸಿಕೊಟ್ಟನು. ಶರೀರ ವಿಕಾರವನ್ನು ದೂರ ಮಾಡಿದನು, ಲಿಂಗವನ್ನು ಕರಸ್ಥಲದಲ್ಲಿ ಸ್ಥಾಪಿಸಿದನು. ಹಿಂದಿನ ಜನ್ಮಗಳನ್ನೆಲ್ಲ ದೂರಮಾಡಿದನು. ಮುಂದಿನ ಮುಕ್ತಿಮಾರ್ಗವನ್ನು ತಿಳಿಸಿಕೊಟ್ಟನು.

ಚೆನ್ನಮಲ್ಲಿಕಾರ್ಜುನನ ಸತ್ಯದ ರೂಪವನ್ನು ಎನಗೆ ಗುರುವು ತೋರಿಸಿಕೊಟ್ಟನು ಎಂದು ಅಕ್ಕಮಹಾದೇವಿ ಹೇಳಿದ್ದಾಳೆ.

ಅಕ್ಕಮಹಾದೇವಿಯ ಶಿಕ್ಷಾಗುರು ಗುರುಲಿಂಗದೇವರೆಂದೂ, ದೀಕ್ಷಾಗುರು ಮರುಳಸಿದ್ಧರೆಂದೂ ಅಭಿಪ್ರಾಯವಿದೆ. ಮಲ್ಲಿನಾಥಾಚಾರ್ಯ ಎಂಬ ಗುರುವಿನ ಪ್ರಸ್ತಾಪವೂ ಬಂದಿದೆ. ಆದರೆ ಅಕ್ಕಮಹಾದೇವಿ ತನ್ನ ವಚನದಲ್ಲಿ ಹೇಳಿದಂತೆ ಗುರುಲಿಂಗದೇವರೇ ಆಕೆಯ ಗುರುವೆಂದು ತೀರ್ಮಾನಿಸಬಹುದು:

'ಶ್ರೀ ಗುರುಲಿಂಗದೇವರು ತಮ್ಮ ಹಸ್ತವ ತಂದು ಎನ್ನ ಮಸ್ತಕದ ಮೇಲೆ ಇರಿಸಿದಾಗಲೇ ಎನ್ನ ಭವಂ ನಾಸ್ತಿಯಾಗಿತ್ತು."

ಎಂಬಲ್ಲಿ ಮತ್ತು

"ಎನ್ನ ಜ್ಞಾನ ಸ್ಥಲದಲ್ಲಿದ್ದ ಮಹಾಲಿಂಗವನು
ಎನ್ನಸರ್ವಾಂಗದೊಳಹೊರಗೆ ತೆರಹಿಲ್ಲದಳವಡಿಸಿದ
ನಮ್ಮ ಶ್ರೀಗುರುಲಿಂಗದೇವ ಚೆನ್ನ ಮಲ್ಲಿಕಾರ್ಜುನ"

ಎಂಬಲ್ಲಿ ಗುರುಲಿಂಗದೇವರೇ ಆಕೆಯ ಗುರು ಎಂಬುದು ಸ್ಪಷ್ಟವಾಗುತ್ತದೆ.

ಮಹಾದೇವಿ ಉಡುತಡಿಯಲ್ಲಿಯೇ ತನ್ನ ಬಾಲ್ಯವನ್ನು ಕಳೆದದ್ದು. ಅವಳಿಗೆ ಬಾಲ್ಯದಲ್ಲಿಯೇ ಉತ್ತಮ ಶಿಕ್ಷಣ ದೊರೆತಿತ್ತೆಂಬುದು ಆಕೆಯ ವಚನಗಳಿಂದ ಗೊತ್ತಾಗುತ್ತದೆ.

ಅರಲುಗೊಂಡ ಕೆರೆಗೆ ತೆರೆಬಂದು ಹಾಯ್ದಂತೆ,
ಬರಲುಗೊಂಡ ಸಸಿಗೆ ಮಳೆ ಸುರಿದಂತಾಯ್ತು ನೋಡಾ
ಇಂದೆನಗೆ ಇಹದ ಸುಖ ಪರದ ಗತಿ ನಡೆದು ಬಂದಂತಾಯಿತ್ತು
ನೋಡಾ ಚೆನ್ನಮಲ್ಲಿಕಾರ್ಜುನಯ್ಯ
ಗುರುಪಾದವ ಕಂಡು ಧನ್ಯನಾದೆನು ನೋಡಾ

ಮಹಾದೇವಿಯಕ್ಕ ಈ ವಚನದಲ್ಲಿ ಗುರುವಿನ ಪಾದದ ಮಹಿಮೆಯನ್ನು ತಿಳಿಸಿದ್ದಾಳೆ. ಅರಲು ಮಾತ್ರವಿದ್ದ ಕೆರೆಗೆ ನದಿ ಬಂದು ಸೇರಿದಂತೆ, ಬರಲಾದ ಸಸಿಗೆ ಮಳೆ ಬಂದು ಚಿಗುರಲು ಅನುಕೂಲವಾದಂತೆ ಆಯಿತು. ಇಂದು ಈ ಲೋಕದಲ್ಲಿ ಸುಖವು ಸಿಕ್ಕಿದೆ, ಪರಲೋಕದಲ್ಲಿ ಸದ್ಗತಿ ಆಗುವದು. ಗುರುಪಾದವನ್ನು ಕಂಡು ಧನ್ಯಳಾದೆನು ಎಂದು ಹೇಳಿದ್ದಾಳೆ.

"ಆಲಿಸೆನ್ನ ಬಿನ್ನಪವ, ಲಾಲಿಸೆನ್ನ ಬಿನ್ನಪವ, ಪಾಲಿಸೆನ್ನ ಬಿನ್ನಪವ ಏಕೆನ್ನ ಮೊರೆಯ ಕೇಳೆ? ನೋಡೆನ್ನ ದುಃಖವ ಚೆನ್ನಮಲ್ಲಿಕಾರ್ಜುನ" ಹೇ ಚೆನ್ನ ಮಲ್ಲಿಕಾರ್ಜುನ ! ನೀನೇಕೆ ಎನ್ನ ಪ್ರಾರ್ಥನೆಯ ಕೇಳಲಾರೆ? ಎನ್ನ ದುಃಖವ ಕೇಳಲಾರೆ? ನೀನು ಲಾಲಿಸಯ್ಯ. ಪಾಲಿಸಯ್ಯ. ಎನ್ನ ಮೊರೆಯ ಕೇಳಯ್ಯ ಎಂದಿದ್ದಾಳೆ ಮಹಾದೇವಿಯಕ್ಕ ಈ ವಚನದಿಂದ ಆಕೆಗೆ ಬಾಲ್ಯದಲ್ಲಿಯೇ ಪರಮಾತ್ಮನ ಹಂಬಲವಾಗಿ ಪ್ರಾರ್ಥನೆಯಾಗಿ ಮಾಡಿರಬೇಕೆನಿಸುತ್ತದೆ.

ಅಕ್ಕ ಕೇಳವ್ವ ಅಕ್ಕಯ್ಯ ನಾನೊಂದು ಕನಸ ಕಂಡೆ
ಅಕ್ಕ ಅಡಕಿ ಓಲೆ ತೆಂಗಿನಕಾಯಿ ಕಂಡೆ
ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು
ಭಿಕ್ಷಕ್ಕೆ ಮನೆಗೆ ಬಂದುದ ಕಂಡನವ್ವಾ
ಮಿಕ್ಕು ಮೀರಿ ಹೋದವ ಬೆಂಬತ್ತಿ ಕೈಹಿಡಿದೆನು
ಚೆನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು

ಅಕ್ಕಮಹಾದೇವಿ ಕನಸಿನಲ್ಲಿ ಚೆನ್ನಮಲ್ಲಿಕಾರ್ಜುನನು ಬಂದುದನ್ನು ಹೇಳಿದ್ದಾಳೆ. ಅಕ್ಕ ಕೇಳು ನಾನೊಂದು ಕನಸು ಕಂಡೆನು. ಕೆಂಪಾದ ಜಡೆಯ ಚಿಕ್ಕಚಿಕ್ಕ ಹಲ್ಲಿರುವ ಶೇಷ್ಠ ವ್ಯಕ್ತಿಯಾದ

ಪರಶಿವನು ನನ್ನ ಮನೆಗೆ ಭಿಕ್ಷೆಗೆ ಬಂದನು. ನಾನು ಆತನನ್ನು ಹಿಂಬಾಲಿಸಿ ಕೈಹಿಡಿದೆನು. ಚೆನ್ನಮಲ್ಲಿಕಾರ್ಜುನನನ್ನು ಕಂಡು ಕಣ್ತೆರೆದೆನು ಎಂದಿದ್ದಾಳೆ.

ಈ ರೀತಿ ಆಕೆಯ ಕನಸು–ಮನಸುಗಳಲ್ಲಿ ಚೆನ್ನಮಲ್ಲಿಕಾರ್ಜುನ ನೆಲೆಗೊಳ್ಳುತ್ತಿರುವಂತೆಯೇ, ಆಕೆಯ ಯೌವನ ಆರಂಭವಾಗುತ್ತದೆ. ಮೊದಲೇ ರೂಪಸಿಯಾದ ಆಕೆ ಈಗ ಲಾವಣ್ಯ ಭರಿತಳಾದಳು. ಈ ಸ್ಥಿತಿಯನ್ನು ಹರಿಹರನು. "ಸೋಮನ ಕಿರಣದಂತೆ, ವಸಂತನ ವಶೀಕರಣದಂತೆ, ನವಲಕುಮಿಯ ಭಾಗ್ಯದಂತೆ, ಮಳಯಾನಿಳನ ಮದದಂತೆ, ಯೌವನ ಮದೋನ್ಮತ್ತ ವಿಳಾಸ ವಿಭ್ರಮಕಳಾ ಪರಿಪೂರ್ಣಶರೀರೆ"ಯಾಗಿದ್ದಳೆಂದು ಬಣ್ಣಿಸಿದ್ದಾನೆ. ಈ ವರ್ಣನೆ ಆಕೆ ಸುಂದರಿಯಾಗಿದ್ದಳೆಂಬುದನ್ನು ದೃಢೀಕರಿಸುತ್ತದೆ.

ಅಕ್ಕಮಹಾದೇವಿಯ ತಂದೆ–ತಾಯಿಗಳು ಆಕೆಯ ಮದುವೆಯ ಬಗ್ಗೆ ಆಲೋಚಿಸುವ ಮೊದಲೇ ಒಂದು ಅನಿರೀಕ್ಷಿತ ಘಟನೆ ನಡೆಯುತ್ತದೆ. ಒಂದು ದಿನ ಉಡುತಡಿಯ ರಾಜನಾದ ಕೌಶಿಕನು ವೈಹಾಳಿಯನ್ನು ಮುಗಿಸಿ ಬಹಳ ಸಂಭ್ರಮದಿಂದ ಮೆರವಣಿಗೆಯಲ್ಲಿ ಅರಮನೆಗೆ ಹಿಂತಿರುಗುತ್ತಿರುವಾಗ, ಅಕ್ಕಮಹಾದೇವಿ ತನ್ನ ಮನೆಯ ಎದುರು ಸ್ನೇಹಿತೆಯರೊಂದಿಗೆ ನಿಂತು ಆ ದೃಶ್ಯವನ್ನು ನೋಡುತ್ತಿರುತ್ತಾಳೆ. ಕೌಶಿಕ ಅವಳನ್ನು ನೋಡುತ್ತಾನೆ. ಅವಳ ರೂಪಕ್ಕೆ ಆಕರ್ಷಿತನಾಗುತ್ತಾನೆ. ಆಕೆಯನ್ನು ತನ್ನವಳನ್ನಾಗಿಸುವ ಹಂಬಲ ಉಂಟಾಗುತ್ತದೆ. ಮೆರವಣಿಗೆ ಕೊನೆಗೊಳ್ಳುತ್ತಿದ್ದಂತೆಯೇ ತನ್ನ ಮಂತ್ರಿಯ ಹತ್ತಿರ ತನ್ನ ಮನೋಭಿಲಾಷೆಯನ್ನು ತಿಳಿಸುತ್ತಾನೆ. ಈಗ ಮಹಾದೇವಿಯ ಮದುವೆಯ ಸಮಸ್ಯೆ ಹುಟ್ಟಿಕೊಳ್ಳುತ್ತದೆ.

ಕೌಶಿಕನ ಆಪ್ತಸೇವಕರು ರಾಜನ ಇಚ್ಛೆಯನ್ನು ಈಡೇರಿಸಲು ಮಹಾದೇವಿಯ ತಂದೆ–ತಾಯಿಗಳಲ್ಲಿಗೆ ಬರುತ್ತಾರೆ. ರಾಜನಿಗೆ ಮಗಳನ್ನು ಕೊಟ್ಟು ಮದುವೆ ಮಾಡಲು ತಿಳಿಸುತ್ತಾರೆ. ಶಿವಭಕ್ತರೂ, ಸಾಧು ಸ್ವಭಾವದವರೂ ಆದ ತಂದೆ ತಾಯಿಗಳಿಗೆ ಇದು ಒಂದು ದೊಡ್ಡ ಸಮಸ್ಯೆಯಾಗಿ ಕಾಡುತ್ತದೆ. ಪರಧರ್ಮದವನಾದ ರಾಜನ ಜೊತೆಗೆ ತಮ್ಮ ಮಗಳ ಮದುವೆ ಮಾಡಲು ಸಂಪ್ರದಾಯಸ್ಥರಾದ ಅವರ ಮನಸ್ಸು ಒಪ್ಪುವುದಿಲ್ಲ. ಒಂದು ವೇಳೆ ಮದುವೆಗೆ ಒಪ್ಪಿಗೆ ಸೂಚಿಸದಿದ್ದರೆ ರಾಜನ ಕೋಪಕ್ಕೆ ಗುರಿಯಾಗಬೇಕಾಗಬಹುದು ಎಂಬ ಭಯವೂ ಕಾಡುತ್ತದೆ. ಈ ರೀತಿಯಲ್ಲಿ ಉಭಯಸಂಕಟಕ್ಕೆ ಸಿಲುಕಿಕೊಂಡ ಅವರನ್ನು ಕವಿಗಳು ತಮ್ಮ ತಮ್ಮ ದೃಷ್ಟಿಗನುಗುಣವಾಗಿ ಕಂಡುಕೊಂಡಿದ್ದಾರೆ.

ಹರಿಹರನು ತನ್ನ ಕಾವ್ಯದಲ್ಲಿ ಕೌಶಿಕನು ಅತಿಕೋಪಿ ಮತ್ತು ಅತಿ ನಿಷ್ಠುರನನ್ನಾಗಿ ಚಿತ್ರಿಸಿದ್ದಾನೆ. ಇಂತಹ ರಾಜನ ಸೇವಕರು ಆರಂಭದಲ್ಲಿ ಮಹಾದೇವಿಯ ತಂದೆ–ತಾಯಿಗಳೊಂದಿಗೆ

ವಿನಯದಿಂದಲೇ ವರ್ತಿಸುತ್ತಾರೆ. ಅನೇಕ ಆಶೆ-ಆಮಿಷಗಳನ್ನು ತೋರಿಸುತ್ತಾರೆ. ಅಂತಹ ಸಂದರ್ಭದಲ್ಲಿ ಮಹಾದೇವಿ ಖಡಾಖಂಡಿವಾಗಿ ನಿರಾಕರಿಸುತ್ತಾಳೆ. ಮಹಾದೇವಿಯ ನಿರಾಕರಣೆಯಿಂದ ರಾಜನಿಗೆ ಬಹಳ ಬೇಸರವಾಗುತ್ತದೆ. ಹೇಗಾದರೂ ಮಾಡಿ ತನ್ನ ಆಸೆಯನ್ನು ಈಡೇರಿಸಲು ಆಪ್ತ ಸೇವಕರಿಗೆ ಕೇಳಿಕೊಂಡಾಗ ಅವರು ಮಹಾದೇವಿಯ ತಂದೆ-ತಾಯಿಗಳಲ್ಲಿಗೆ ಬಂದು

ಕೂಸು ಕೊಡದಿರ್ದೊಡಂ ಕೂಲಬೆಸಸಿದಂ
ಕೂಸು ಕೊಟ್ಟೊಡೆ ನಿಮಗೆ ಸಕಲ ಸುಖಸಂಪದಂ

ಎಂದು ದರ್ಪದಿಂದಲೇ ಹೇಳುತ್ತಾರೆ. ಈಗ ನಿರ್ಮಲ-ಸುಮತಿಯರಿಗೆ ಸಾವು-ಬದುಕಿನ ಸಮಸ್ಯೆಯಾಗಿ, ಆಪತ್ತಿನಿಂದ ಪಾರಾಗಲು ಮದುವೆಗೆ ಒಪ್ಪಿಗೆ ಸೂಚಿಸುವುದೇ ಸರಿಯೆಂದು ಕಾಣುತ್ತದೆ. ಹಾಗಾಗಿ ಅವರು ಮಗಳಿಗೆ ಮದುವೆಗೆ ಸಮ್ಮತಿಸಲು ಹೇಳುತ್ತಾರೆ. ಪರಿಸ್ಥಿತಿಯನ್ನು ಅರ್ಥೈಸಿಕೊಂಡ ಮಹಾದೇವಿ ಶಿವಪೂಜೆಗೆ ಮಹೇಶ್ವರರ ಗೋಷ್ಠಿಯಲ್ಲಿ ಬೆರೆಯುವುದಕ್ಕೆ ಗುರುವಿನ ಸೇವೆಗೆ ಅಡ್ಡಿಬರದಂತೆ ಅರಸ ನೋಡಿಕೊಳ್ಳಬೇಕೆಂಬ ಕರಾರಿನ ಮೇರೆಗೆ ಮದುವೆಗೆ ಒಪ್ಪಿಕೊಳ್ಳುತ್ತಾಳೆ. ಮದುವೆ ಅತ್ಯಂತ ಸಂಭ್ರಮದಿಂದ ನಡೆಯುತ್ತದೆ. ರಾಜ ಮಹಾದೇವಿಯೊಂದಿಗೆ ಸುಖದಿಂದ ದಿನ ಕಳೆಯುತ್ತಿದ್ದಂತೆ ಆಕೆಯ ಕರಾರುಗಳನ್ನು ಒಂದೊಂದು ಮುರಿಯುತ್ತಾನೆ. ಆಗ ಮಹಾದೇವಿ ತನ್ನ ಕರಾರಿನಂತೆ ಅರಮನೆಯನ್ನು ತ್ಯಜಿಸುತ್ತಾಳೆ. ಮತ್ತು ತನ್ನ ಜೀವನದ ಗಂತವ್ಯವನ್ನು ಹುಡುಕಲು ಹೊರಡುತ್ತಾಳೆ. ಈ ಸನ್ನವೇಶಕ್ಕೆ ಹೊಂದುವ ಮಹಾದೇವಿಯ ಒಂದು ವಚನ ಹೀಗಿದೆ:

ಎಮ್ಮೆಗೊಂದು ಚಿಂತೆ, ಸಮಗಾರನಿಗೊಂದು ಚಿಂತೆ
ನನಗೆ ನನ್ನ ಚಿಂತೆ! ತನಗೆ ತನ್ನ ಕಾಮದ ಚಿಂತೆ
ಒಲ್ಲೆ ಹೋಗು, ಸೆರಗ ಬಿಡು ಮರುಳೆ
ಎನಗೆ ಚೆನ್ನಮಲ್ಲಿಕಾರ್ಜುನ ದೇವರು
ಒಲಿದನೋ ಒಲಿಯನೋ ಎಂಬ ಚಿಂತೆ

ಚಿಂತೆ ಎಲ್ಲರಿಗೂ ಇರುವುದೆಂದು ಅಕ್ಕಮಹಾದೇವಿ ತನ್ನ ಚಿಂತೆಯನ್ನು ತಿಳಿಸಿದ್ದಾಳೆ. ಎಮ್ಮೆಗೆ ಹೊಟ್ಟೆತುಂಬಿಕೊಳ್ಳುವ ಚಿಂತೆಯಾದರೆ ಸಮಗಾರನಿಗೆ ಎಮ್ಮೆಯ ಚರ್ಮದ ಬಗ್ಗೆ ಚಿಂತೆ ಆಗುವುದು. ನನಗೆ ನನ್ನ ಚಿಂತೆಯಾದರೆ ಕಾಮಿಗೆ ತನ್ನ ಕಾಮದ ಚಿಂತೆ. ನಾನು ಕಾಮವ ತ್ಯಜಿಸಿದ್ದೇನೆ. ಒಲ್ಲೆ ಹೋಗು ನನ್ನ ಸೆರಗು ಬಿಡು ಮರುಳೆ ಎಂದ ಅಕ್ಕಮಹಾದೇವಿ ಎನಗೆ ಎನ್ನ

ಗಂಡ ಮಲ್ಲಿಕಾರ್ಜುನದೇವರು ಒಲಿಯುವನೋ ಅಥವಾ ಒಲಿಯನೋ ಎಂಬ ಚಿಂತೆಯಿದೆ ಎಂದಿದ್ದಾಳೆ.

ಚೆನ್ನಮಲ್ಲಿಕಾರ್ಜುನನನ್ನು ಒಲಿಸುವ ಘನವಾದ ಚಿಂತೆಯಲ್ಲಿರುವ ಮಹಾದೇವಿ ವಿಲಾಸದ ಕಡೆಗೆ ಕರೆಯುವ ಕೌಶಿಕನನ್ನು ವಿವಾಹದ ನಂತರವೇ ತ್ಯಜಿಸಿರಬಹುದೆಂದು ಭಾವಿಸಲು ಇಲ್ಲಿ ಅವಕಾಶವಿದೆ.

ಇಹಕ್ಕೊಬ್ಬ ಗಂಡನೆ, ಪರಕೊಬ್ಬ ಗಂಡನೆ?
ಲೌಕಿಕಕೊಬ್ಬ ಗಂಡನೆ, ಪಾರಮಾರ್ಥಿಕಕೊಬ್ಬ ಗಂಡನೆ?
ಎನ್ನ ಗಂಡ ಚೆನ್ನಮಲ್ಲಿಕಾರ್ಜುನ ದೇವರಲ್ಲದೆ
ಮಿಕ್ಕಿನ ಗಂಡರೆಲ್ಲ ಮುಗಿಲ ಮರೆಯ ಬೊಂಬೆಯಂತೆ

ಎಂದು ಅಕ್ಕಮಹಾದೇವಿ ಇಹಕ್ಕೆ ಮತ್ತು ಪರಕ್ಕೆ ಇಬ್ಬರು ಗಂಡಂದಿರಿರುವುದನ್ನು ಅಲ್ಲಗಳೆದಿದ್ದಾಳೆ. 'ಎನ್ನ ಗಂಡ ಚೆನ್ನಮಲ್ಲಿಕಾರ್ಜುನ ದೇವರು' ಎಂದು ಖಂಡಿತವಾಗಿ ಆಕೆ ಹೇಳಿರುವಾಗ ಕೌಶಿಕನ ಸಂಬಂಧವನ್ನು ಒಪ್ಪಿಕೊಳ್ಳುವುದು ಕಷ್ಟವಾಗುತ್ತದೆ. ಇಲ್ಲಿ ವ್ಯಕ್ತವಾಗುವ ಐಹಿಕ ಗಂಡನ ಬಗ್ಗೆ ಅವಳಿಗಿರುವ ತಿರಸ್ಕಾರವೂ ಗಮನಾರ್ಹವಾದದ್ದಾಗಿದೆ.

ಚಾಮರಸ ಮೊದಲಾದವರು ಅಕ್ಕಮಹಾದೇವಿಯ ಐಹಿಕ ಮದುವೆಯ ಸಂಬಂಧವನ್ನು ಉಪಾಯದಿಂದ ತಪ್ಪಿಸಿರುವಂತೆ ತೋರುತ್ತದೆ. ಕವಿಗಳ ಧೋರಣೆ, ಕಲ್ಪನ ಶಕ್ತಿಗಳ ಆಧಾರದ ಮೇಲೆ ಸನ್ನಿವೇಶ, ಪಾತ್ರ ಚಿತ್ರಣಗಳು ಬೇರೆಯಾಗುವುದು. ಪರಿವರ್ತನೆ ಹೊಂದುವುದು ಕಾವ್ಯಕೃತಿಗಳಲ್ಲಿ ಸಾಮಾನ್ಯವೇ ಆಗಿದೆ. ಹಾಗಾಗಿ ಅಕ್ಕಮಹಾದೇವಿಯ ಚರಿತ್ರಕಾರರಲ್ಲಿ ಭಿನ್ನಾಭಿಪ್ರಾಯಗಳು ಇರುವುದು ಸಹಜ. ಕೌಶಿಕ ಮತ್ತು ಮಹಾದೇವಿಯರ ಮದುವೆಯೇ ಆಗಲಿಲ್ಲವೆಂದು ಸಾಧಿಸಿದಾಗ ಅವರಿಬ್ಬರೂ ಸ್ವಲ್ಪ ಸಮಯವಾದರೂ ಅರಮನೆಯಲ್ಲಿ ಜೊತೆಯಾಗಿದ್ದರೆಂಬುದನ್ನು ಪೂರ್ಣವಾಗಿ ನಿರಾಕರಿಸುವಂತಿಲ್ಲ.

ಕೌಶಿಕನನ್ನು ತೊರೆದ ಮಹಾದೇವಿ ತನ್ನ ಹುಟ್ಟೂರನ್ನೂ ತಂದೆ-ತಾಯಿಗಳನ್ನೂ ಬಿಟ್ಟು ತನ್ನ ಆತ್ಮೋದ್ಧಾರದ ಅಥವಾ ಆತ್ಮಸಾಕ್ಷಾತ್ಕಾರದ ಮಾರ್ಗ ಹುಡುಕುತ್ತ ಹೊರಡುತ್ತಾಳೆ. ಉಡುತಡಿಯನ್ನು ಬಿಟ್ಟ ಈಕೆ ನೇರವಾಗಿ ಶ್ರೀ ಶೈಲಕ್ಕೆ ಹೋದಳೆ ಅಥವಾ ಕಲ್ಯಾಣಕ್ಕೆ ತೆರಳಿ ಅಲ್ಲಿ ಸ್ವಲ್ಪಕಾಲ ಇದ್ದು ನಂತರ ಶ್ರೀ ಶೈಲಕ್ಕೆ ಹೋದಳೆ ಎಂಬುದು ಕಾವ್ಯಗಳಲ್ಲಿನ ವ್ಯತ್ಯಾಸದಿಂದ ಸಣ್ಣ ಸಮಸ್ಯೆಯಾಗಿದೆ. ಈ ಸಮಸ್ಯೆಗೆ ಪ್ರಮುಖ ಕಾರಣ ಅಕ್ಕಮಹಾದೇವಿಯ ಜೀವನವನ್ನು ಪ್ರಥಮವಾಗಿ ಚಿತ್ರಿಸಿದ ಹರಿಹರನು

ತನ್ನ ಕಾವ್ಯದಲ್ಲಿ ಆಕೆ ಕಲ್ಯಾಣಕ್ಕೆ ಹೋದ ವಿಷಯವನ್ನು ಉಲ್ಲೇಖಿಸದಿರುವುದು. ಚಾಮರಸ, ಚೆನ್ನಬಸವಾಂಕ ಮೊದಲಾದ ಕವಿಗಳು, ಶೂನ್ಯ ಸಂಪಾದನಕಾರರು ಅಕ್ಕಮಹಾದೇವಿ ಉಡುತಡಿಯಿಂದ ಕಲ್ಯಾಣಕ್ಕೆ ಬಂದು ಶಿವಶರಣರ ಅನುಭಾವಗೋಷ್ಠಿಯಲ್ಲಿ ಭಾಗವಹಿಸಿರುವುದನ್ನೂ, ಬಸವಣ್ಣ, ಅಲ್ಲಮಪ್ರಭುಗಳ ಸನ್ನಿಧಾನದಲ್ಲಿ ಸ್ವಲ್ಪ ಸಮಯ ಕಳೆದುದನ್ನೂ ವರ್ಣಿಸಿದ್ದಾರೆ. ಇಷ್ಟು ಮಾತ್ರ ಅಲ್ಲ, ಆಕೆಯ ವಚನಗಳಲ್ಲಿಯೂ ಸಹ ಕಲ್ಯಾಣದ ಉಲ್ಲೇಖವಿದೆ.

ಶಿವಮೊಗ್ಗ ಜಿಲ್ಲೆಯ ಉಡುತಡಿಯಿಂದ ಬೀದರ ಜಿಲ್ಲೆಯ ಕಲ್ಯಾಣಕ್ಕೆ ವಾಹನ ಸಂಪರ್ಕವಿಲ್ಲದ ಆ ಕಾಲದಲ್ಲಿ ಒಬ್ಬ ಯುವತಿ ಏಕಾಕಿಯಾಗಿ ನಡೆದು ಬರುವುದು ಸುಲಭದ ಕೆಲಸವಲ್ಲ. ಹಸಿವು ಬಾಯಾರಿಕೆಗಳನ್ನು ನಿರ್ಲಕ್ಷಿಸಿ, ಪುಂಡು-ಪೋಕರಿಗಳ ತೊಂದರೆಗೆ ಧೈರ್ಯಗೆಡದೆ ಆಕೆ ಪಯಣಿಸಿದ್ದು ಒಂದು ಸಾಹಸವೇ ಸರಿ. ಈ ಪಯಣದ ಅನುಭವಗಳನ್ನು ತನ್ನ ವಚನದಲ್ಲಿ ಈ ರೀತಿ ವರ್ಣಿಸಿದ್ದಾರೆ.

ಹಸಿವಾದೊಡೆ ಊರೊಳಗೆ ಭಿಕ್ಷಾನ್ನಗಳುಂಟು
ತೃಷೆಯಾದಡೆ ಕೆರೆ-ಹಳ್ಳ-ಬಾವಿಗಳುಂಟು
ಅಂಗಶೀತಕ್ಕೆ ಬೀಸಾಟ ಅರಿವೆಗಳುಂಟು
ಶಯನಕ್ಕೆ ಹಾಳು ದೇಗುಲಗಳುಂಟು
ಚೆನ್ನ ಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನೆನಗುಂಟು

ಮಾನವನಿಗೆ ಅತಿ ಅವಶ್ಯಕವಾದ ಆಹಾರ ನೀರು ವಿಶ್ರಾಂತಿ ಹಾಗೂ ಸಂಗಾತಿಯ ಬಗ್ಗೆ ಅಕ್ಕ ಮಹಾದೇವಿ ಈ ರೀತಿಯಲ್ಲಿ ಹೇಳಿದ್ದಾಳೆ. ಹಸಿವಾದರೆ ಭಿಕ್ಷೆ ಬೇಡಿ ತಂದ ಅನ್ನವಿದೆ. ನೀರಡಿಕೆಯಾದರೆ ಕೆರೆ, ಬಾವಿ, ಹಳ್ಳಗಳಿವೆ. ವಿಶ್ರಾಂತಿ ಪಡೆಯಲು ಹಾಳು ದೇಗುಲಗಳಿವೆ. ಚೆನ್ನಮಲ್ಲಿಕಾರ್ಜುನ ನೀನು ಎನ್ನ ಸಂಗಾತಕ್ಕೆ ಇರುವೆ ಎಂದಿದ್ದಾಳೆ.

ಮುಡಿ ಬಿಟ್ಟು, ಮೊಗಬಾಡಿ, ತನುಕರಗಿದವಳ
ಎನ್ನನೇಕೆ ನುಡಿಸುವಿರಿ ಎಲೆ ಅಣ್ಣಗಳಿರಾ?
ಎನ್ನನೇಕೆ ಕಾಡುವಿರಿ ಎಲೆ ತಂದೆಗಳಿರಾ?
ಬಲು ಹಳಿದು, ಭವಗೆಟ್ಟು, ಛಲವಳಿದು
ಭಕ್ತೆಯಾಗಿ ಚೆನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳು

ತನ್ನ ಕೇಶರಾಶಿಯನ್ನೇ ಶರೀರವನ್ನು ಮುಚ್ಚಲು ಬಳಸಿಕೊಂಡು ಹೊರಟಿರುವ ಅಕ್ಕಮಹಾದೇವಿಯನ್ನು ಜನರು ಕಾಡಿಸಿದಾಗ ಆಕೆ ಅವರನ್ನು ಈ ರೀತಿ ಕೇಳಿದ್ದಾಳೆ. ಅಣ್ಣಗಳಿರಾ, ತಂದೆಗಳಿರಾ ನಾನು ಚೆನ್ನಮಲ್ಲಿಕಾರ್ಜುನನ ಸೇರಿ ಸಂಸಾರದವಳಾಗಿದ್ದೇನೆ. ಛಲವಳಿದಿವೆ, ಬಲವು ಅಳಿದಿದೆ, ಮೊಗ ಬಾಡಿದೆ, ಮುಡಿ ಕಟ್ಟದೇ ಇದ್ದೇನೆ, ಶರೀರವು ಕರಗಿ ಕಳವಳಗೊಂಡಿದ್ದೇನೆ. ನನ್ನನ್ನು ಏಕೆ ಮಾತನಾಡಿಸುತ್ತೀರಿ? ನನ್ನನ್ನೇಕೆ ಕಾಡಿಸುವಿರಿ? ಅಂತೆಯೇ ಅವಳು ಎಲ್ಲ ಬಗೆಯ ಆತಂಕಗಳನ್ನೂ ಮೀರಿ ಕಲ್ಯಾಣಕ್ಕೆ ಬಂದು ತಲುಪುತ್ತಾಳೆ.

ಕಲ್ಯಾಣ ತಲುಪುತ್ತಿದ್ದಂತೆ ಆಕೆ ಕಿನ್ನರಿ ಬೊಮ್ಮಯ್ಯನ ಪರೀಕ್ಷೆಗೆ ಒಳಪಡಬೇಕಾಗುತ್ತದೆ. ಕೆಲವು ಕೃತಿಗಳು ಕಿನ್ನರಿ ಬೊಮ್ಮಯ ಮಹಾದೇವಿಯ ವೈರಾಗ್ಯವನ್ನು ಪರೀಕ್ಷಿಸಲು ಬಂದ ಶರಣನೆಂದು ಹೇಳಿದರೆ, ಇನ್ನು ಕೆಲವು ಕೃತಿಗಳು ಮೊದಲು ಆತನು ಆಕೆಯಲ್ಲಿ ಮೋಹಪರವಶನಾಗಿದ್ದು, ನಂತರ ಆಕೆಯ ವ್ಯಕ್ತಿತ್ವದಿಂದ ಆಕೆಯ ಘನತೆಯನ್ನು ತಿಳಿದುಕೊಂಡವನೆಂದು ಹೇಳುತ್ತವೆ.

ಅಕ್ಕಮಹಾದೇವಿಯ ವಚನಗಳಿಂದಲೇ ಕಿನ್ನರಿ ಬೊಮ್ಮಯ್ಯ ಮೋಹಕ್ಕೊಳಗಾಗುವಂತಹ ವ್ಯಕ್ತಿಯಲ್ಲ ಎಂಬುದು ಸ್ಪಷ್ಟವಾಗುತ್ತದೆ. ಆತನ ಕೆಲವು ಸಂಶಯಗಳಿಗೆ ಉತ್ತರಿಸುವಂತೆ ಆಕೆಯ ವಚನಗಳಿವೆ. ಅಲ್ಲಿ ಅವಳು ಒಟ್ಟಾಗಿ ಐಹಿಕದ ಸಂಬಂಧಗಳನ್ನು ಮೀರಿ ನಿಂತವಳೆಂಬುದನ್ನು ಸ್ಪಷ್ಟಪಡಿಸುತ್ತಾಳೆ.

ಕಿನ್ನರಿ ಬೊಮ್ಮಯ್ಯನ ಭೇಟಿಯ ನಂತರ ಮಹಾದೇವಿ ಕಲ್ಯಾಣವನ್ನು ಪ್ರವೇಶಿಸುತ್ತಾಳೆ. ಬಸವಣ್ಣ, ಚೆನ್ನಬಸವಣ್ಣ, ಅಲ್ಲಮಪ್ರಭು, ಅಕ್ಕ ನಾಗಲಾಂಬೆ, ನೀಲಾಂಬೆ ಮುಂತಾದವರ ವಿಷಯವನ್ನು ಕೇಳಿ ತಿಳಿದ ಅವಳು ಈಗ ಅವರನ್ನು ಪ್ರತ್ಯಕ್ಷವಾಗಿ ಕಂಡು ತನ್ನ ಸಾಧನೆಗೆ ಹೊಸ ಮೆರುಗನ್ನು ತಂದುಕೊಳ್ಳುವಳು. ಕಲ್ಯಾಣವನ್ನು ಸಂದರ್ಶಿಸುವುದೇ ಆಕೆಗೆ ಖುಷಿಯ ವಿಷಯ. ಅವಳು ಕಲ್ಯಾಣವನ್ನು ಈ ರೀತಿ ವರ್ಣಿಸುವಳು.

ಕಲ್ಯಾಣ ಕೈಲಾಸವೆಂಬ ನುಡಿ ಹಸನಾಯಿತ್ತು
ಒಳಗೂ ಕಲ್ಯಾಣ, ಹೊರಗೂ ಕಲ್ಯಾಣ
ಇದರಂತವನಾರು ಬಲ್ಲರಯ್ಯಾ?
ನಿಮ್ಮ ಸತ್ಯ ಶರಣರ ಸುಳುಹು ತೋರುತ್ತಿದೆಯಯ್ಯಾ
ನಿಮ್ಮ ಶರಣ ಬಸವಣ್ಣನ ಕಾಂಬೆನೆಂಬ

ತವಕವೇನಗಾಯಿತ್ತು ಕೇಳಾ
ಚೆನ್ನಮಲ್ಲಿಕಾರ್ಜುನ

ಅಕ್ಕಮಹಾದೇವಿ ಅನುಭವ ಮಂಟಪವಿದ್ದ ಕಲ್ಯಾಣಕ್ಕೆ ಶರಣರಲ್ಲದವರು ಬರಬಾರದು, ಎಂದಿದ್ದಾಳೆ. ಆಶೆ ಆಮಿಷವನ್ನಳಿಯದೆ ಕಲ್ಯಾಣದತ್ತ ನಡೆಯಬಾರದು. ಅಂತರಂಗ ಬಹಿರಂಗ ಶುದ್ಧಿಯಿಲ್ಲದವರು, ನಾನೆಂಬ ಅಹಂಕಾರ ಬಿಡದವರು ಕಲ್ಯಾಣಕ್ಕೆ ಬರಬಾರದು. ಓಗೆ ಕಲ್ಯಾಣವು ದಿವ್ಯಕ್ಷೇತ್ರ ಎಂದಿದ್ದಾಳೆ. ಅಕ್ಕಮಹಾದೇವಿ ಇಂತಹ ಅರ್ಹತೆಯನ್ನು ಹೊಂದಿದ್ದರೂ ಅನುಭವ ಮಂಟಪಕ್ಕೆ ಪ್ರವೇಶಿಸಲು ಅಲ್ಲಮಪ್ರಭುವಿನಿಂದ ಪರೀಕ್ಷೆಗೆ ಒಳಗಾಗಬೇಕಾಗುತ್ತದೆ. ಅಲ್ಲಮ ಪ್ರಭುವಿಗೆ ಆಕೆಯ ಸಾಮರ್ಥ್ಯ ತಿಳಿದಿದ್ದರೂ ಅನುಭವ ಮಂಟಪದ ಎಲ್ಲ ಶರಣ-ಶರಣೆಯರಿಗೆ ಅದು ಗೊತ್ತಾಗಲಿ ಎಂಬ ದೃಷ್ಟಿಯಿಂದ ಪರೀಕ್ಷೆ ನಡೆಸುವನು.

ಅಕ್ಕಮಹಾದೇವಿ ಅನುಭವ ಂಟಪವನ್ನು ಪ್ರವೇಶಿಸಿದಾಗ ಬಸವಣ್ಣನವರು ಆಕೆಯ ವ್ಯಕ್ತಿತ್ವ ವಿಶೇಷತೆಗಳನ್ನು ವಿವರಿಸುತ್ತಾರೆ. ಆಗ ಅಲ್ಲಮ ಪ್ರಭು:

ಉದಮದದ ಯೌವನವನೊಳಕೊಂಡು
ಸತಿ ನೀನು ಇತ್ತಲೇಕೆ ಬಂದೆಯವ್ವಾ?
ಸತಿಯೆಂದಡೆ ಮುನಿವರು ನಮ್ಮ ಶರಣರು
ನಿನ್ನ ಪತಿಯ ಕುರುಹು ಕೇಳಿದಡೆ ಬಂದು ಕುಳ್ಳಿರು
ಅಲ್ಲದಡೆ ತೊಲಗು ತಾಯೆ

ಎಂದು ನಿಷ್ಠುರವಾಗಿ ಹೇಳಿದಾಗ ಅಕ್ಕಮಹಾದೇವಿಯು:

ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವರಿಗೆ ನಾನೊಲಿದೆ
ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ
ಚೆಲುವಂಗೆ ನಾನೊಲಿದೆ
ಭವವಿಲ್ಲದ ಭಯವಿಲ್ಲದ ಚೆಲುವಂಗೆ ನಾನೊಲಿದೆ
ಕುಲಸೀಮೆಯಿಲ್ಲದ ನಿಸ್ಸೀಮ ಚೆಲುವಂಗೆ ನಾನೊಲಿದೆ
ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ
ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು ತಾಯೆ!

ಚೆನ್ನಮಲ್ಲಿಕಾರ್ಜುನನೇ ಚೆಲುವ ಗಂಡನೆಂದು ಹೇಳಿ, ಸಾಯುವ ಕೆಟ್ಟುಹೋಗುವ ಗಂಡರನ್ನು ಒಲೆಯಲ್ಲಿ ಹಾಕು ಎಂದಿದ್ದಾಳೆ. ಅಂತಃಕರಣಕ್ಕೆ ತಾಗುವಂತಹ ತಾತ್ತ್ವಿಕವಾಗಿ ಒಪ್ಪಿಕೊಳ್ಳಬೇಕಾದಂತಹ ಉತ್ತರಗಳನ್ನು ಆಕೆ ನೀಡಿದಾಗಲೂ ಅಲ್ಲಮಪ್ರಭುಗಳು ಮತ್ತೆ ಮತ್ತೆ ಕೆಣಕಿ-ಕೆಣಕಿ ಪ್ರಶ್ನಿಸುತ್ತಾರೆ. ಎಲ್ಲಾ ಪ್ರಶ್ನೆಗಳಿಗೂ ಅನುಭಾವದ ಎತ್ತರದಲ್ಲಿಯೇ ನಿಂತು ಉತ್ತರಿಸಿದ ಮಹಾದೇವಿ ತನ್ನ 'ಶರಣ ಸತಿ, ಲಿಂಗ ಪತಿ' ಭಾವವನ್ನು ಸ್ಪಷ್ಟಪಡಿಸುತ್ತಾಳೆ. ಆಕೆಯ ಈ ತಾತ್ತ್ವಿಕ ನಿಲುವಿಗೆ ಪ್ರಭುದೇವರು ಚಕಿತರಾಗಿ ಆಕೆಯ ಶ್ರೀಪಾದಕ್ಕೆ ನಮಿಸುವರು. ಅನುಭವ ಪಂಟಪದ ಹಿರಿಯರೆಲ್ಲ ಕಿರಿವಯಸ್ಸಿನ ಅಕ್ಕ ಮಹಾದೇವಿಗೆ ನಮಿಸುವರು.

ಕಲ್ಯಾಣದಲ್ಲಿ, ಶರಣ-ಶರಣೆಯರ ಪರಿಸರದಲ್ಲಿ, ಅಲ್ಲಿ ನಡೆಯುವ ಗೋಷ್ಠಿಗಳಲ್ಲಿ, ಅವರು ಕೈಗೊಂಡ ಸಾಧನೆಗಳಲ್ಲಿ ಅಕ್ಕಮಹಾದೇವಿ ಬೆರೆತು ಆಧ್ಯಾತ್ಮಿಕ ಪ್ರಗತಿಯನ್ನು ಸಾಧಿಸಿಕೊಳ್ಳುವಳು. ಆಕೆ ಬಸವಣ್ಣ ಪ್ರಭುದೇವರ ಆಶ್ರಯ, ಸಾನ್ನಿಧ್ಯದಲ್ಲಿ ತನ್ನ ಯೋಗಸಾಧನೆಯನ್ನು ಮುಂದುವರಿಸಿ ಅದರ ಫಲವನ್ನು ಕಲ್ಯಾಣದಲ್ಲಿಯೇ ಅನುಭವಿಸಿದಳು.

ಶಿವಶರಣರು ಕಂಡುಕೊಂಡ ಷಟ್‌ಸ್ಥಲದ ಸಾಧನೆಯ ಮೇರೆಗೆ ಅಕ್ಕ ಮಹಾದೇವಿ ಭಕ್ತಸ್ಥಲದಿಂದ ಶರಣ ಸ್ಥಲಕೆ ಬಂದು ಮುಟ್ಟಿದಾಗ ಅವಳ ಸಾಧನೆಯ ಉನ್ನತಿಯನ್ನು ಗಮನಿಸಿದ ಅಲ್ಲಮ ಪ್ರಭು ಆಕೆಗೆ ಐಕ್ಯಸ್ಥಲದ ಕಡೆಗೆ ಬೆಟ್ಟು ಮಾಡಿ ತೋರಿಸುವರು.

ನೀನು ನಾನೆಂಬುವ ಭಯ ಸಂಗವಳಿದು
ತಾನು ತಾನಾದ ತ್ರಿಕೂಟವೆಂಬ ಮಹಾಗಿರಿಯ ಮೆಟ್ಟಿ
ತುಟ್ಟತುದಿಯಲ್ಲಿ ನೋಡಲು
ಬಟ್ಟಬಯಲು ಕಾಣಬಹುದು ನೋಡಾ
ಆ ಬಟ್ಟ ಬಯಲು ಬೆರಸುವಡೆ
ಶ್ರೀಗಿರಿಯೊಳಗೊಂದು ಕಾಣಬಾರದ ಕದಳಿಯುಂಟು ನೋಡಾ
ಆ ಕದಳಿಯ ತಿಳಿಯಲ್ಲಿ ಒಳಹೊಕ್ಕು ನೋಡಲು
ತೊಳಗಿ ಬೆಳಗುವ ಜ್ಯೋತಿಯುಂಟು ನೋಡಾ
ನಡೆಯಲ್ಲಿಗೆ ತಾಯೇ
ಗುಹೇಶ್ವರ ಲಿಂಗದಲ್ಲಿ ಪರವು ನಿನಗೆ ಸಯವಪ್ಪುರು ನೋಡಾ

ಪ್ರಭುದೇವರ ಈ ವಿವರಣೆ ಬರಿಯ ಸಾಂಕೇತಿಕವಾಗಿದೆ. ಅಕ್ಕಮಹಾದೇವಿ ತನ್ನ ಆರಾಧ್ಯದೈವವಾದ ಶ್ರೀಶೈಲ ಮಲ್ಲಿಕಾರ್ಜುನನಲ್ಲಿ ಐಕ್ಯವನ್ನು ಪಡೆಯಬೇಕಾದ ವಿಷಯವನ್ನು ಪ್ರಭುದೇವರು ಈ ರೀತಿ ಸಾಂಕೇತಿಕವಾಗಿ ತಿಳಿಸಿದ್ದಾಳೆ. ಆಕೆ ಅದಕ್ಕೆ ಸಮ್ಮತಿಸಿ ಶ್ರೀ ಶೈಲಕ್ಕೆ ಹೊರಡಲು ತಯಾರಾದಳು. ಶ್ರೀಶೈಲಕ್ಕೆ ಹೊರಟುನಿಂತ ಆಕೆ ಕಲ್ಯಾಣದ ಶರಣರನ್ನು ಈ ರೀತಿ ನೆನಸಿಕೊಂಡಳು.

ಅಯ್ಯಾ ನಿಮ್ಮ ಅನುಭಾವಿಗಳ ಸಂಗದಿಂದ
ಎನ್ನ ತನು ಶುದ್ಧವಾಯಿತ್ತು
ಅಯ್ಯಾ ನಿಮ್ಮ ಅನುಭಾವಿಗಳು ಎನ್ನ ಒರೆದೊರೆದು ಕಡಿಕಡಿದು
ಅರೆದರೆದು ಅನುಮಾಡಿದ ಕಾರಣ ಎನ್ನ ಮನ ಶುದ್ಧವಾಯಿತ್ತು.
ಎನ್ನ ಸರ್ವಭೋಗಾದಿ ಭೋಗಂಗಳೆಲ್ಲ ನಿಮ್ಮ ಶರಣಗರ್ಪಿತವಾಗಿ
ಎನ್ನ ಪ್ರಾಣ ಶುದ್ಧವಾಯಿತ್ತು
ಎನ್ನ ಸರ್ವೇಂದ್ರಿಯಗಳೆಲ್ಲವು ನಿಮ್ಮ ಶರಣರ ಪ್ರಸಾದವ ಕೊಂಡ ಕಾರಣ
ಎನ್ನ ಸರ್ವಾಂಗ ಶುದ್ಧವಾಯಿತ್ತಯ್ಯ
ನಿಮ್ಮ ಶರಣರಿಂತು ಎನ್ನನಾಗು ಮಾಡಿದ ಕಾರಣ
ಚೆನ್ನ ಮಲ್ಲಿಕಾರ್ಜುನಯ್ಯ
ನಿಮ್ಮ ಶರಣರಿಗೆ ತೊಡಿಗೆಯಾದೆನಯ್ಯಾ ಪ್ರಭುವೆ

ಎಂದು ಮಹಾದೇವಿ ತನ್ನ ಸರ್ವಾಂಗ ಶುದ್ಧವಾದ ಮಹತಿಯನ್ನು ಪ್ರಭುವಿನಲ್ಲಿ ನಿವೇದಿಸುತ್ತಾಳೆ

ಮಹಾದೇವಿ ಕಲ್ಯಾಣದ ಶರಣ-ಶರಣೆಯರಿಂದ ಬೀಳ್ಕೊಂಡು ಶ್ರೀ ಶೈಲದ ಕಡೆಗೆ ಸಾಗುತ್ತಾಳೆ. ಕಾಡು-ಮೇಡುಗಳನ್ನು ಅಲೆದು, ಬೆಟ್ಟ ಗುಡ್ಡಗಳನ್ನು ತುಳಿದು ಸಾಗಬೇಕಾದ ಮಾರ್ಗವದು. ಹಸಿವು, ಬಾಯಾರಿಕೆ, ಒಂಟಿತನದ ಭಯ ತೊಂದರೆಗಳನ್ನು ಆತ್ಮಶಕ್ತಿಯಿಂದ ನಿವಾರಿಸಿಕೊಳ್ಳುತ್ತ, ಸಮರ್ಪಣಾ ಭಾವನೆಯನ್ನು ದೃಢಗೊಳಿಸುತ್ತ, ಆದಷ್ಟು ಶೀಘ್ರವಾಗಿ ಆಕೆ ಶ್ರೀಶೈಲವನ್ನು ತಲುಪುವ ಪ್ರಯತ್ನ ಮಾಡಿದಳು. ಮನುಷ್ಯನ ಸ್ವಾಭಾವಿಕವಾದ ಲೌಕಿಕ ಬೇಕು-ಬೇಡಗಳಿಗೆಲ್ಲ ತನ್ನಿಂದ ದೂರ ಸರಿಯಲು ತನ್ನ ಅವಸರದ ಕೆಲಸವನ್ನು ಒಂದು ವಚನದಲ್ಲಿ ಈ ರೀತಿ ತಿಳಿಸಿಕೊಡುತ್ತಾಳೆ.

ಹಸಿವೇ ನೀನು ನಿಲ್ಲು ನಿಲ್ಲು, ತೃಷೆಯೇ ನೀನು ನಿಲ್ಲು ನಿಲ್ಲು
ನಿದ್ರೆಯೇ ನೀನು ನಿಲ್ಲು ನಿಲ್ಲು

ಕಾಮವೇ ನೀನು ನಿಲ್ಲು ನಿಲ್ಲು, ಕ್ರೋಧವೇ ನೀನು ನಿಲ್ಲು ನಿಲ್ಲು
ಮೋಹವೇ ನೀನು ನಿಲ್ಲು ನಿಲ್ಲು, ಲೋಭವೇ ನೀನು ನಿಲ್ಲು ನಿಲ್ಲು
ಮದವೇ ನೀನು ನಿಲ್ಲು ನಿಲ್ಲು, ಮಚ್ಚರವೇ ನೀನು ನಿಲ್ಲು ನಿಲ್ಲು
ಸಚರಾಚರವೇ ನೀನು ನಿಲ್ಲು ನಿಲ್ಲು
ನಾನು ಚೆನ್ನಮಲ್ಲಿಕಾರ್ಜುನ ದೇವರ
ಅವಸರದ ಓಲೆಯನೊಯ್ಯುತ್ತಿದ್ದೇನೆ, ಶರಣಾರ್ಥಿ

ಮಹಾದೇವಿ ತನ್ನ ಅನೇಕ ಆತಂಕಗಳು ನಿವಾರಿಸಿಕೊಂಡು ಯಶಸ್ವಿಯಾಗಿ ಶ್ರೀ ಶೈಲವನ್ನು ಕಂಡು ಧನ್ಯಳಾಗುವಳು.

ವನವೆಲ್ಲ ಕಲ್ಪತರು, ಗಿಡವೆಲ್ಲ ಮರುಜೇವಣಿ
ಶಿಲೆಗಳೆಲ್ಲ ಪರುಷ, ನೆಲವೆಲ್ಲ ಅವಿಮುಕ್ತ ಕ್ಷೇತ್ರ
ಜನವೆಲ್ಲ ನಿರ್ಜರಾಮೃತ ಮೃಗವೆಲ್ಲ ಪುರುಷಮೃಗ
ಎಡರುವ ಹರಳೆಲ್ಲ ಚಿಂತಾಮಣಿ
ಚೆನ್ನಮಲ್ಲಿಕಾರ್ಜುನಯ್ಯನ ನಚ್ಚಿನ ಗಿರಿಯ ಸುತ್ತಿ
ನೋಡುತ್ತ ಬಂದು, ಕದಳಿಯ ಬನವ ಕಂಡೆ ನಾನು

ಈ ರೀತಿ ಮಹಾದೇವಿ ಶ್ರೀ ಶೈಲದ ಚೆನ್ನಮಲ್ಲಿಕಾರ್ಜುನನ ಗಿರಿಯನ್ನು ಸುತ್ತಿ ನೋಡಿ ಬಂದು, ಕದಳಿಯ ಬನವನ್ನು ಪ್ರವೇಶಿಸುವಳು ಕದಳಿ ಪ್ರಕೃತಿಯಲ್ಲಿ ಒಂದು ಬನವಾಗಿದ್ದರೂ ಆಕೆಯ ದೃಷ್ಟಿಯಲ್ಲಿ ಅದು ತನು, ಮನ, ಭವ ಘೋರಾರಣ್ಯ ಇನ್ನೂ ಏನೇನೋ ಆಗಿದೆ. ಇದನ್ನೆಲ್ಲ ಗೆದ್ದು ಭವಹರನನ್ನು ಕಾಣುವುದು ಆಕೆಯ ಗುರಿಯಾಗಿತ್ತು. ಆ ಗುರಿಯನ್ನು ಆಕೆ ತಲುಪಿದಳು.

ಚೆನ್ನಮಲ್ಲಿಕಾರ್ಕುನನ ಹೃದಯ ಕಮಲದಲ್ಲಿ ಲೀನವಾಗುವುದೇ ಆಕೆಯ ಐಕ್ಯಸ್ಥಲದ ಉದ್ದೇಶ. ಈ ಐಕ್ಯಸ್ಥಲವನ್ನು ತಲುಪಿದಾಗ ಆಕೆಗೆ ಅವರ್ಣನೀಯ ಅನುಭವ ಉಂಟಾಗುತ್ತದೆ.

ಲಿಂಗವೆನ್ನೆ ಲಿಂಗೈಕ್ಯವೆನ್ನೆ
ಸಂಗವೆನ್ನೆ ನಿಸ್ಸಂಗವೆನ್ನೆ
ಆಯಿತ್ತೆನ್ನೆ, ಆಗದೆನ್ನೆ
ಚೆನ್ನಮಲ್ಲಿಕಾರ್ಜುನ ಲಿಂಗದಲ್ಲಿ
ಘನಲಿಂಗೈಕ್ಯವಾದ ಬಳಿಕ ಏನೂ ಎನ್ನೆ

ಎಂದು ಒಂದು ವಚನದಲ್ಲಿ ಮಹಾದೇವಿ ಹೇಳಿದ್ದಾರೆ.

ಹೀಗೆ ಅಕ್ಕಮಹಾದೇವಿಯ ಶರಣ ಸತಿತ್ವವು ತನ್ನ ಸಿದ್ಧಿಯನ್ನು ಪಡೆದು ಲಿಂಗಪತಿತ್ವದಲ್ಲಿ ಐಕ್ಯವಾಯಿತು.

## ಮೀರಾಬಾಯಿ ನಡೆದ ದಾರಿ

ಹಿಂದಿ ಸಾಹಿತ್ಯದಲ್ಲಿ ಪ್ರೇಮ, ಭಕ್ತಿ, ವಿರಹ, ವೇದನೆ ಮತ್ತು ಆತ್ಮಸಮರ್ಪಣೆಯ ಭಾವನೆಗಳನ್ನು ಕಾವ್ಯದಲ್ಲಿ ವ್ಯಕ್ತಪಡಿಸುವ ಪ್ರೇಮಯೋಗಿನಿ ಮೀರಾಳಿಗೆ ವಿಶಿಷ್ಟವಾದ ಸ್ಥಾನವಿದೆ. ಮೀರಾಳು ಮಾಧುರ್ಯ ಭಾವಕ್ಕೆ ಉತ್ತರ ಭಾರತದಲ್ಲಿ ಎಷ್ಟು ವ್ಯಾಪಕತೆ ನೀಡಿದಳೆಂದರೆ ಇಂದಿಗೂ ಸಹ ಪ್ರತಿಯೊಬ್ಬರೂ ಮೀರಾಳ ಗೀತೆಗಳನ್ನು ಕೇಳಿ ಭಕ್ತಿರಸದಲ್ಲಿ ಮೀಯುತ್ತಾರೆ. (ಡಾ. ಕೃಷ್ಣದೇವ ಶರ್ಮ ೧೯೭೩) ಮೀರಾಳು ಕೇವಲ ಭಕ್ತಿರಸವನ್ನು ಹರಿಸಿದ್ದಕ್ಕಾಗಿ ಮಾತ್ರ ಅವಳಿಗೆ ಮಹತ್ವ ಕೊಡುವುದಿಲ್ಲ. ಅದಕ್ಕೆ ಬದಲಾಗಿ ಯಾವ ಕ್ಷೇತ್ರದಲ್ಲಿ ಖಡ್ಗದ ಧಾರೆಯಲ್ಲಿ ನಡೆಯುವುದರಲ್ಲೇ ಜೀವನದ ಸಾರ್ಥತೆಯನ್ನು ತಿಳಿದಿದ್ದ, ಎಲ್ಲಿಯ ಕಣ–ಕಣವೂ ದೇಶ, ಧರ್ಮ, ಪ್ರತಿಷ್ಠೆ ಮತ್ತು ಆತ್ಮಪ್ರತಿಷ್ಠೆಯ ರಕ್ಷಣೆಗಾಗಿ ಪ್ರತಿಕ್ಷಣವೂ ರಕ್ತದ ಸ್ನಾನ ಮಾಡಿತ್ತಿದ್ದರೋ ಅಂತಹ ಕ್ಷೇತ್ರದಲ್ಲಿ ಭಕ್ತಿರಸ ಧಾರೆಯನ್ನು ಹರಿಸಿದ್ದರಿಂದ ಅವಳ ಮಹತ್ವ ಇನ್ನೂ ಹೆಚ್ಚಾಗುತ್ತದೆ.ರಾಜಸ್ಥಾನದ ವೀರ ಮತ್ತು ಹುತಾತ್ಮರ ಭೂಮಿಯಲ್ಲಿ ಮೀರಳ ರೂಪದಲ್ಲಿ ಆ ಹೂವು ಅರಳಿತು. ಅದರ ಸುವಾಸನೆಯಿಂದ ಇಡೀ ಸಮಾಜವೇ ರಸಮಯವಾಯಿತು. ರಾಜಸ್ಥಾನದಲ್ಲಿ ಮೀರಾಳ ಆವಿರ್ಭಾವ ಸಾಹಿತ್ಯ ಸಮಾಜ ಮತ್ತು ಧರ್ಮಕ್ಕೆ ವರದಾನವೇನೋ ಆಯಿತು. ಆದರೆ ನಾನ್ನೂರು ವರ್ಷಗಳಲ್ಲಿ ಯಾವ ಮಾತು ಜನ–ಜನರ ಹೃದಯದಲ್ಲಿ ತುಂಬಿಕೊಂಡಿತೋ, ಯಾವ ಕಥೆ ಮತ್ತು ನೆನಪುಗಳಲ್ಲಿ ಜನಪರ ಗೀತೆ ಮತ್ತು ಜನಪದ ಕಥೆಗಳ ಭಂಡಾರ ತುಂಬಿತೋ, ಯಾರ ಪದಗಳ ಗಾಯನ ಮತ್ತು ಆಲಿಸುವಿಕೆಯಿಂದ ಭಕ್ತಜನರ ಹೃದಯ ಮಗ್ನವಾಯಿತೋ ಅಂತಹ ಮೀರಳ ಜೀವನದ ಪ್ರಯಾಣದ ಬಗ್ಗೆ ಸಂಪೂರ್ಣ ಮಾಹಿತಿ ಲಭ್ಯವಾಗಿಲ್ಲ.

ಮೀರಾಳ ಜೀವನದ ಕುರಿತಾಗಿ ಬಹಳ ಸಮಯದಿಂದ ಚರ್ಚೆಗಳು ನಡೆಯುತ್ತಲೇ ಇವೆ. ಅನೇಕ ರೀತಿಯ ಹೇಳಿಕೆಗಳು ಮತ್ತು ಶ್ರದ್ಧಾಯುಕ್ತ ಘಟನೆಗಳಿಂದ ಮೀರಾಳ ಜೀವನದ ಪ್ರಾಮಾಣಿಕ ರೂಪವನ್ನು ನಿರ್ಧರಿಸುವುದು ಬಹಳ ಕಷ್ಟಸಾಧ್ಯ. ಮೀರಾಳ ಯುಗ ಭಕ್ತಿ ಪ್ರಧಾನ ಯುಗವಾಗಿತ್ತು. ಆ ಸಮಯದ ಶ್ರೇಷ್ಠ ಸಂತರು ಮತ್ತು ಭಕ್ತ ಪ್ರಪಂಚ ಈ ಜಗತ್ತನ್ನು ನಿಸ್ಸಾರ ಮತ್ತು ಸಾಧನಾ ಮಾರ್ಗದಲ್ಲಿ ಬಾಧಕ ಎಂದು ತಿಳಿದಿದ್ದರು. ಆದುದರಿಂದ ಪ್ರಾಪಂಚಿಕ ಮತ್ತು ಐಹಿಕ ಜೀವನದಲ್ಲಿ

ಅವರಿಗೆ ಮೋಹವಿರಲಿಲ್ಲ. ಇಂತಹ ವಾತವರಣದಲ್ಲಿ 'ಗಿರಿಧರ ನಾಗರ'ನ ಭಕ್ತೆ ಮೀರಾಳ ಮೂಲಕ ಆತ್ಮಚರಿತ್ರೆ ಬರೆಯುವುದು ಅಸಂಭವವಾಗಿತ್ತು. ಆದರೆ ಮೀರಾಳ ರಚನೆಗಳಲ್ಲಿ ಅವಳ ಇಚ್ಛೆ, ಭಾವನೆ ಮತ್ತು ಪ್ರಸಂಗಗಳಿಂದ ಸ್ವಲ್ಪ ಮಟ್ಟಿಗೆ ಅವರ ಅಂತರ್ಜಗತ್ತು ಮತ್ತು ಅವರನ್ನು ಪ್ರಭಾವಿತಗೊಳಿಸಿದ ಪರಿಸ್ಥಿತಿಗಳ ಉಲ್ಲೇಖ ಸಿಗುತ್ತದೆ. ಮೀರಾಳ ಜೀವನವನ್ನು ತಿಳಿಯಲು ಅವಳ ಅಂತರ್‌ಸಾಕ್ಷ್ಯ ಮತ್ತು ಬಹಿರ್‌ಸಾಕ್ಷ್ಯಗಳ ರೂಪದಲ್ಲಿ ವರ್ಗೀಕರಣ ಮಾಡಲಾಗಿದೆ.

ಬಹಿರ್ ಸಾಕ್ಷ್ಯದಲ್ಲಿ ಮೀರಾಳನ್ನು ಸಂಬಂಧಿಸಿ ಬೇರೆಯವರ ರಚನೆಗಳು, ಸಮಕಾಲೀನ ಮತ್ತು ನಂತರದ ಕವಿಗಳು, ಭಕ್ತರು ಮತ್ತು ಸಂತರ ಉಲ್ಲೇಖಗಳು, ಪ್ರಾಚೀನ ತಾಮ್ರಪತ್ರಗಳು, ಶಿಲಾಲೇಖಗಳು, ಚಿತ್ರಗಳು, ರಾಜನೈತಿಕ ಮತ್ತು ಐತಿಹಾಸಿಕ ಗ್ರಂಥಗಳು, ಜನಪದಗೀತೆಗಳು ಮತ್ತು ಮೀರಾಳಿಗೆ ಸಂಬಂಧಿಸಿದ ಆಧುನಿಕ ಗ್ರಂಥಗಳಲ್ಲಿ ಮಾಹಿತಿ ಸಿಗುತ್ತವೆ. ಅಂತರ್‌ಸಾಕ್ಷ್ಯದ ಬಗ್ಗೆ ಕವಯತ್ರಿಯ ರಚನೆಗಳಲ್ಲಿ ಉಲ್ಲೇಖವಿದೆ. ಈ ಸಾಮಗ್ರಿಗಳ ಮನನದಿಂದ ಮೀರಾಬಾಯಿಯ ಜೀವನದ ಪರಿಚಯ ನಮಗಾಗುತ್ತದೆ.

ಬಹಿರ್‌ಸಾಕ್ಷ್ಯದ ಒಳಗೆ ಸಮಕಾಲೀನ ಮತ್ತು ನಂತರ ಭಕ್ತರ, ಕವಿಗಳ ಮೂಲಕ ಮೀರಾಳನ್ನು ಉಲ್ಲೇಖಿಸುವ ಸಾಮಗ್ರಿಗಳು ಸಾಕಷ್ಟಿವೆ. ಬಹುಶಃ ಎಲ್ಲಾ ಪ್ರಮುಖ ಮತ್ತು ಪ್ರಸಿದ್ಧ ಭಕ್ತರ ಒಂದಲ್ಲ ಒಂದು ರೀತಿಯಲ್ಲಿ ಮೀರಾಳ ಉಲ್ಲೇಖ ಅವಶ್ಯವಾಗಿ ಮಾಡಿದ್ದಾರೆ. ಕಬೀರ್, ಸೇನಾನ್ನಾವಿ, ನರಸಿಂಹ ಮೆಹತಾ, ಸೂರದಾಸ, ಹರಿರಾಮ ವ್ಯಾಸ, ಧ್ರುವದಾಸ, ಏಕನಾಥ ಮಹಾರಾಜ, ತುಕಾರಾಮ್ ಎಲ್ಲರೂ ಮೀರಾಳ ಉಲ್ಲೇಖ ಮಾಡಿದ್ದಾರೆ ಉದಾಹರಣೆಗೆ:-

**ಕಬೀರ್:-** ರಂಕಾ ತಾರೆ ಬಂಕಾ ತಾರೆ, ತಾರೆಸಜನಾ ಕಸಾಯಿ ।
ಸುವಾ ಪದಾವತ್ ಗುನಕಾ ತಾರೀ, ತಾರೀಯೆ ಮೀರಾಬಾಯಿ ॥
ಘನಾ, ಸೇನಾ, ರೈದಾಸ್ ನಾಮ್ ತೀಸ್‌ರೀ ಮೀರಾಬಾಯಿ ॥

(ವಕ್ರ ನಕ್ಷತ್ರ, ದರಿದ್ರ ನಕ್ಷತ್ರ ಇತ್ಯಾದಿ ನಕ್ಷತ್ರಗಳನ್ನು ಶೃಂಗಾರಕ್ಕಾಗಿ ಬಿಗಿದುಕೊಳ್ಳುವರು. ಗಿಳಿಯಂತೆ ಒಳ್ಳೆ ಮಾತು ಮತ್ತು ಗುಣದ ತಾಳವಾದ ಮೀರಾ ಬಾಯಿ ನಿಜವಾದ ನಕ್ಷತ್ರ.)

ಘನಾ ಸೇನಾ, ರೈದಾಸ ಇವರಲ್ಲಿ ಮೂರನೆಯವಳು ಮೀರಾಬಾಯಿ

**ನರಸಿಂಹ ಮೆಹತಾ:-** ಮೀರಾಬಾಯಿ ಬಿಖ್ ಅಮೃತ್ ಕೀಧಾಂ, ವಿದುರನೀ
ಆರೋಗ್ಯಾ ಭಾಜೀರೀ ॥

(ಮೀರಾಬಾಯಿ ವಿಷವನ್ನು ಅಮೃತವಾಗಿಸಿದ್ದಾಳೆ)

**ಸೂರದಾಸ:–** ರಂಕಾಬಂಕಾ, ಪೀಪಾ, ನಾಮಾ, ಸೇನ್ ಧನಾಕೆಯೆ ರಾಜ್ ।
ಸದನಾ ರೈದಾಸ್ ಮೀರಾಬಾಯಿ ಕೃಪಾಕರೀ ಬ್ರಜರಾಜ್ ॥

ರಂಕಾ ಬಂಕಾ, ಪೀಪಾ, ನಾಮಾ, ಸೇನ ಘನರು ಕಾರ್ಯವನ್ನು ಮಾಡಿದ್ದಾರೆ. ರೈದಾಸನೂ ಸಹ ಮಾಡಿದ್ದಾನೆ. ಆದರೆ ಬ್ರಜರಾಜನು ಮೀರಾಬಾಯಿಗೆ ದಯೆತೋರಿದ್ದಾನೆ.

**ಏಕನಾಥ ಮಹಾರಾಜ್** :– ವಿಷಿ ಪಿತೀ ಮೀರಾಬಾಯಿ ಸಾಠೀಂ, ವಿದುರಾಚ್ಯಾ
ಹಾರೀಕಣ್ಯಾಂ ಸ್ವಯಂ ॥

(ಜ್ಞಾನಿಯಾದ ಮೀರಾಬಾಯಿ ವಿಷವನ್ನು ಕುಡಿದು ಜೀರ್ಣಿಸಿಕೊಂಡಿದ್ದಾಳೆ.)

**ತುಕಾರಾಂ:–** ಮೀರಾಬಾಯಿ ಸಾಠೀಂ ಪ್ಯಾಲಾ ತೋ ವಿಷಾಚಾ। ಲಾಖ್ಯಾ
ಕೋಲಾಟ್ಯಾ ಚಾ ಡೋಲ್ ಪಿಟೀ ॥

ಮೀರಾಬಾಯಿಗೆ ವಿಷದ ಬಟ್ಟಲನ್ನು ಕಳುಹಿಸಿ ಕೋಲಾಹಲದ ಡಂಗುರ ಸಾರುವುದನ್ನು ನೋಡಬಯಸಿದರು.

ಹಿಂದಿ ಗುಜರಾತಿ ಮತ್ತು ಮರಾಠಿ ಭಾಷೆಯ ಸಂತ ಹಾಗೂ ಭಕ್ತಕವಿಗಳ ಈ ಮೇಲಿನ ಮಾತುಗಳಿಂದ ಮೀರಾಬಾಯಿ ತನ್ನ ಸಮಯದ ಲೋಕಪ್ರಸಿದ್ಧ ಭಕ್ತೆಯಾಗಿದ್ದಳು ಎಂಬುದು ಸ್ಪಷ್ಟವಾಗುತ್ತದೆ.

ಅವಳ ಭಕ್ತಿಯ ತುಡಿತ, ಅನನ್ಯತೆ ಮತ್ತು ಬಾಹ್ಯ ಹಾಗೂ ಆಂತರಂಗಿಕ ಸಂಘರ್ಷಗಳಲ್ಲಿ ಸ್ಥಿರತೆಯಿಂದಾಗಿ ಕಾರಣ ಮೀರಾಳ ಬಗ್ಗೆ ಎಲ್ಲರಿಗೂ ಅಪಾರವಾದ ಶ್ರದ್ಧೆ. ಭಕ್ತಕವಿಗಳ ವಾಣಿಗಳಲ್ಲದೆ ನಾಭಾದಾಸ ರಚಿಸಿದ 'ಭಕ್ತಿ ಮಲಾ' ಪ್ರಿಯದಾಸನ 'ಭಕ್ತಿರಸ ಬೋಧಿನೀ ಟೀಕಾ', ವೇಣೀಮಾಧವದಾಸನ 'ಗೋಸಾಯಿ ಚರಿತ', 'ವೈಷ್ಣವನ್ ಕೀ ವಾರ್ತಾ' ಮೊದಲಾದ ಸಾಂಪ್ರದಾಯಿಕ ಗ್ರಂಥಗಳಲ್ಲಿ ಮೀರಾಳ ಭಕ್ತಿಭಾವನೆ, ತನ್ಮಯತೆ, ಜೀವನ ಸಂಘರ್ಷ ಮತ್ತು ಅಂತಿಮ ಸಮಯದಲ್ಲಿ ಶ್ರೀ ರಣಛೋಡನ ಮೂರ್ತಿಯಲ್ಲಿ ಲೀನವಾಗುವಿಕೆ ಮೊದಲಾದ ಘಟನೆಗಳ ಉಲ್ಲೇಖ ಮಾಡಲಾಗಿದೆ. ಮೀರಾಳ ಜೀವನದ ಘಟನೆಗಳನ್ನಾಧರಿಸಿ ಅನೇಕ ರೀತಿಯ ಜನಶ್ರುತಿಗಳು ಮತ್ತು ಜನಪದ ಗೀತೆಗಳು ಪ್ರಚಲಿತದಲ್ಲಿವೆ. ಈ ಎಲ್ಲದರಲ್ಲಿ ಮೀರಾಳ ಭಕ್ತಿಭಾವನೆ, ಸಮಕಾಲೀನ ಆಚಾರ್ಯರು, ಭಕ್ತರಲ್ಲಿ ಮೀರಾಳ ಸಾಕ್ಷಾತ್ಕಾರ, ವೃಂದಾವನ, ದ್ವಾರಕಾ ಮೊದಲಾದ

ಪವಿತ್ರ ಸ್ಥಳಗಳ ಯಾತ್ರೆ ಮೊದಲಾದ ವಿವರಗಳು ಸಿಗುತ್ತವೆ. ಈ ಸಾಮಗ್ರಿಗಳ ಆಧಾರದಲ್ಲಿ ಮೀರಾಳ ಜೀವನದ ಕಾಲಾವಧಿಯ ವಿವರಗಳನ್ನು ತಿಳಿಯಬಹುದಾಗಿದೆ.

ಮೀರಾಳ ಜನ್ಮ ಯಾವಾಗ ಆಯಿತು? ಎಂಬ ವಿಷಯದಲ್ಲಿ ಮತಭೇದವಿದೆ. ಮಿಶ್ರಬಂಧು, ಆಚಾರ್ಯ ರಾಮಚಂದ್ರ ಶುಕ್ಲ ಮೀರಾಳ ಜನ್ಮ ಸಂವತ್ ೧೫೭೩ ಎಂದು ಹೇಳಿದ್ದಾರೆ. ಶ್ರೀ ಗೌರೀಶಂಕರ್ ಹೀರಾನಂದ್ ಓಝೂ, ಡಾ. ರಾಮ್ಕುಮಾರ್ ವರ್ಮಾ, ಶ್ರೀ ಹರಿವಿಲಾಸ್ ಶಾರದಾ, ಆಚಾರ್ಯ ಪರಶುರಾಮ ಚತುರ್ವೇದಿ ಸಂ ೫೫೫ ಎಂದಿದ್ದಾರೆ. ಡಾ. ಧೀರೇಂದ್ರ ವರ್ಮಾ, ಡಾ. ಶ್ರೀಕೃಷ್ಣಲಾಲ್ ಸಂ. ೧೫೬೦ನ್ನು ಸ್ವೀಕರಿಸಿದ್ದಾರೆ.

ಇದಲ್ಲದೆ ಮೀರಾಬಾಯಿಯನ್ನು ಸಂಬಂಧಿಸಿದ ಹೇಳಿಕೆಗಳಲ್ಲಿ ಪರಸ್ಪರ ವಿರೋಧಗಳಿರುವುದರಿಂದ ಕಾಲದ ನಿರ್ಣಯದಲ್ಲಿ ಅನೇಕ ತೊಡಕುಗಳಿವೆ, (ಡಾ. ಕೃಷ್ಣದೇವ ಶರ್ಮ ೧೬೭೩)

ಮೀರಾಳು ಗೋಸ್ವಾಮಿ ತುಲಸೀದಾಸರ ಜೊತೆ ಪತ್ರವ್ಯವಹಾರ ನಡೆಸಿದ್ದಳು. ಎಂಬ ಮಾತು ಬಹಳ ಪ್ರಚಲಿತದಲ್ಲಿದೆ. ವೇಣೀ ಮಾಧವದಾಸನ 'ಮೂಲ ಗೋಸಾಯಿ ಚರಿತ್ರ'ದಲ್ಲಿ ಈ ಕಥೆಯ ವರ್ಣನೆಯಿದೆ. ಅದರಲ್ಲಿ ಮೀರಾಬಾಯಿ ತನ್ನ ಸ್ವಜನರ ದುರ್ವ್ಯವಹಾರಗಳಿಂದ ನೊಂದು ತುಲಸೀದಾಸರಿಗೆ ಪತ್ರ ಬರೆದಳು. ಅದಕ್ಕೆ ಉತ್ತರವಾಗಿ ತುಲಸೀದಾಸರು ಈ ಪ್ರಸಿದ್ಧ ಗೀತವನ್ನು ಬರೆದು ಕಳುಹಿಸಿದರು ಎಂಬ ಉಲ್ಲೇಖವಿದೆ.

ಜಾಕೆ ಪ್ರಿಯ ನ ರಾಮ ವೈದೇಹೀ ।
ಸೋ ಜನ ತಜಿಯೆ ಕೋಟಿ ವೈರಿನ್ ಸಮ ಯದ್ಯಪಿ
ಪರಮ ಸನೇಹೀ ॥

ಯಾರಿಗೆ ಸೀತೆ ಮತ್ತು ರಾಮರು ಪ್ರಿಯರಲ್ಲವೋ ಅವರು ಎಷ್ಟು ಪರಮಸ್ನೇಹಿಗಳಾಗಿದ್ದರೂ ಅವರನ್ನು ಕೋಟಿ ವೈರಿಗಳ ಹಾಗೆ ಬಿಟ್ಟು ಬಿಡಿ. ಮೀರಾ ಮತ್ತು ತುಲಸೀದಾಸರ ಪತ್ರವ್ಯವಹಾರದ ಈ ಘಟನೆಯು ಪ್ರಾಮಾಣಿಕವೆಂದು ಸಿದ್ಧವಾಗಿಲ್ಲ ಹೆಚ್ಚಿನ ವಿದ್ವಾಂಸರು ತುಲಸೀದಾಸರ ಜನ್ಮವನ್ನು ಸಂ. ೧೫೮೯ ಎಂದು ಭಾವಿಸಿದ್ದಾರೆ ಮತ್ತು ಈ ಪತ್ರವ್ಯವಹಾರವು ಸಂ. ೧೫೯೦ರ ಆಸುಪಾಸಿನಲ್ಲಿ ಆಗಬೇಕಾಗಿತ್ತು. ಏಕೆಂದರೆ ಸಂ. ೧೫೬೧ರಲ್ಲಿ ಮೀರಾಳು ಮೇವಾಡವನ್ನು ತ್ಯಜಿಸಿದ್ದಳು. ಮೀರಾಳ ಲೋಕಪ್ರಿಯತೆಯಿಂದ ಪ್ರಭಾವಿತರಾದ ವೇಣೀ ಮಾಧವ ದಾಸರು ಆಕೆಯ ಮತ್ತು ತುಲಸೀದಾಸರ ಸಂಪರ್ಕವನ್ನು ಸ್ಥಾಪಿಸುವ ಕಲ್ಪನೆಯನ್ನು ಮಾಡಿದ್ದರು ಎಂದು ಇತಿಹಾಸಕಾರರ ಅಭಿಪ್ರಾಯವಾಗಿದೆ.

'ಮೀರಾ ಬೃಹತ್ ಪದಸಂಗ್ರಹ'ದಲ್ಲಿ ಸಂಗ್ರಹಿತವಾದ ಒಂದು ಪದದ ಅನುಸಾರವಾಗಿ ಮೀರಾಳ ಕೀರ್ತಿಯನ್ನು ಕೇಳಿದ ಅಕ್ಬರನು ತಾನಸೇನನ ಜೊತೆಗೆ ಆಕೆಯನ್ನು ನೋಡಲು ಬಂದಿದ್ದನು. ಅವನು ಮೀರಾಳ ಭಜನ್‌ನ್ನು ಕೂಡ ಆಲಿಸಿದ್ದನು,. ಅದರ ಉಲ್ಲೇಖವನ್ನು ಪ್ರಿಯದಾಸನು ಈ ರೀತಿಯಲ್ಲಿ ಮಾಡಿದ್ದಾನೆ:

ರೂಪಕೀ ನಿಕಾಯೀ, ಭೂಪ ಅಕ್ಬರ ಭಾಯಿ ಹಿಯೈ ।
ಲಿಯೆ ಸಂಗ ತಾನ್ಸೇನ್, ದೇಖಿಬೆ ಕೌ ಆಯೋ ಹೆ ।
ನಿರಖಿ ನಿಹಾಲ್ ಬೆಯೌ ಛವಿ ಗಿರಧಾರೀ ಲಾಲ್
ಪದ ಸುಖಲಾಜ್ ಏಕ್ ತಬ್ ಹೀ ಚಡಾಯೊ ಹೆ ॥

ಮೀರಾಬಾಯಿಯ ಸೌಂದರ್ಯ ರಾಜ ಅಕ್ಬರನ ಹೃದಯವನ್ನು ಮುಟ್ಟಿತು. ಅವನು ತಾನ್ಸೇನನ ಜೊತೆಗೆ ಆಕೆಯನ್ನು ನೋಡಲು ಬಂದನು. ಗಿರಿಧಾರಿ ಲಾಲನ ಕಾಂತಿಯನ್ನು ನೋಡಿ ಸಂತುಷ್ಟನಾದನು.



ಈ ವೃತ್ತವೂ ಸಹ ಕಪೋಲ-ಕಲ್ಪಿತದ್ದೇ ಆಗಿದೆ. ಏಕೆಂದರೆ ಅಕ್ಬರನ ಜನನ ಸಂ. ೧೫೯೯ ಮತ್ತು ಮೀರಾಳ ಮೃತ್ಯು ಸಂ. ೧೬೩೦ ಎಂದು ತಿಳಿಯಲಾಗಿದೆ. ಆದುದರಿಂದ ೩೧ ವರ್ಷದ ಅಕ್ಬರನಿಗೆ ೭೧ ವರ್ಷದ ಮೀರಾಳಲ್ಲಿ ಸೌಂದರ್ಯ ಸಂಕೇತ ಅನುಪಯುಕ್ತವಾಗುತ್ತದೆ.

'ವೈಷ್ಣವನ್ ಕೀ ವಾರ್ತಾ'ದಲ್ಲಿ ಮೀರಾಳನ್ನು ಸಂಬಂಧಿಸಿದ ಮೂರು ಪ್ರಸಂಗಗಳ ಉಲ್ಲೇಖವಿದೆ – 'ಗೋಪಿಂದ ದಬೇ ಕೀ ವಾರ್ತಾ', 'ಮೀರಾಬಾಯಿ ಕೆ ಪುರೋಹಿತ ರಾಮದಾಸ್ ಕೀ ವಾರ್ತಾ', 'ಕೃಷ್ಣದಾಸ್ ಅಧಿಕಾರೀ ಕೀ ವಾರ್ತಾ' ಈ ವಾರ್ತೆಗಳಿಂದ ಮೀರಾಬಾಯಿಯು ವಲ್ಲಭಾಚಾರ್ಯ, ಹರಿವಂಶ ವ್ಯಾಸ, ಕೃಷ್ಣದಾಸ ಅಧಿಕಾರಿ, ಗೋಪಿಂದ ದುಬೆ, ವಿಠ್ಠಲ ನಥ ಮತ್ತು ರಾಮದಾಸ ಪುರೋಹಿತರ ಸಮಕಾಲೀನಳಾಗಿದ್ದಳು ಎಂಬುದು ಸ್ಪಷ್ಟವಾಗುತ್ತದೆ. ಮೀರಾಳು ವಲ್ಲಭ ಸಂಪ್ರದಾಯದಲ್ಲಿ ದೀಕ್ಷಿತಳಾಗಿರಲಿಲ್ಲ, ಕೃಷ್ಣದಾಸ ಮತ್ತು ಗೋಪಿಂದ ದುಬೆಯ ಭೇಟಿಯಿಂದ ದ್ವಾರಕಾ ಪ್ರವಾಸದ ಮೊದಲೇ ಆಕೆಗೆ ಭಕ್ತ-ಸಮಾಜ(ಡಾ ಕೃಷ್ಣದೇವಶರ್ಮ ೧೯೭೩)ದಲ್ಲಿ ಸಾಕಷ್ಟು ಸಿದ್ಧಿ ಪ್ರಾಪ್ರವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಕೃಷ್ಣದಾಸನ ಕಾಲ ಸಂ. ೧೫೫೪ ರಿಂದ ೧೬೩೪ ಹಿತಹರಿವಂಶರ ಕಾಲ ಸಂ. ೧೫೫೯ ರಿಂದ ೧೬೩೪ ಹಿತಹರಿವಂಶರ ಕಾಲ ಸಂ.೧೫೫೯ ರಿಂದ ೧೬೫೯ ಹರಿರಾಮ್ ವ್ಯಾಸರು ಸಂ. ೧೬೨೨ರ ಆಸುಪಾಸಿನಲ್ಲಿ ವೈಷ್ಣವ ಸಂಪ್ರದಾಯದಲ್ಲಿ ದೀಕ್ಷಿತರಾದರೆಂಬುದು ಐತಿಹಾಸಿಕ ಪ್ರಮಾಣಗಳಿಂದ ಸ್ಪಷ್ಟವಾಗುತ್ತದೆ. ಎಲ್ಲರ ಸಂದರ್ಭವನ್ನು

ಅವಲೋಕಿಸಿದಾಗ ಮೀರಾಳ ಜನ್ಮ ಸಂ. ೧೫೫೫ ರಿಂದ ೬೦ರ ಮಧ್ಯದಲ್ಲಿ ಮತ್ತು ಮೃತ್ಯು ಸಂ.೧೬೨೨ರ ಸುಮಾರಿಗೆ ಎಂದು ಒಪ್ಪಿಕೊಳ್ಳಬಹುದಾಗಿದೆ.

ಜನಪದ ಗೀತೆಗಳಲ್ಲಿ ಮೀರಾಬಾಯಿಯ ಜೀವನಕ್ಕೆ ಸಂಬಂಧಿಸಿದ ಅನೇಕ ಸೂಚನೆಗಳು ಸಿಗುತ್ತವೆ. ಐತಿಹಾಸಿಕ ದೃಷ್ಟಿಯಿಂದ ಪ್ರಾಮಾಣಿಕವಲ್ಲದಿದ್ದರೂ ಇದರ ಸತ್ಯತೆಯನ್ನು ಸಂಪೂರ್ಣವಾಗಿ ನಿರಾಕರಿಸುವಂತಿಲ್ಲ ಏಕೆಂದರೆ ಜನಪದ ಗೀತಗಲ್ಲಿ ದೊರೆವ ಮಾಹಿತಿಗಳು ರೂಪಕದ ಸ್ವರೂಪದಲ್ಲಿದ್ದು ವಾಸ್ತವವನ್ನೂ ಪ್ರತಿನಿಧಿಸುತ್ತವೆ. ಗ್ರಂಥಗಳು ಹೇಳುವಂತೆ ಮೀರಾನ ಹುಟ್ಟೂರು ಮೇಡತಾ. ಆಕೆಯ ಸಂಬಂಧ ಚಿತ್ತೌಡದ ಸೀಸೋದಿಯ ವಂಶದೊಂದಿಗೆ ಇತ್ತು. ಮೀರಾಳು ರಾಜ ಪೋಷಾಕುಗಳನ್ನು ತ್ಯಜಿಸಿ ತುಳಸೀ ಮಾಲೆ ಮತ್ತು ವಸ್ತ್ರವನ್ನು ಧರಿಸಿದಳು. ರಾಣಾನು ಕಳುಹಿಸಿದ ವಿಷದ ಕಾಷಾಯ ಬಟ್ಟಲನ್ನು ಆಕೆ ಗಿರಿಧರ ಗೋಪಾಲನ ಚರಣಾಮೃತ ಎಂದು ಭಾವಿಸಿ ಸ್ವೀಕರಿಸಿದಳು. ಅವಳ ಬಳಿಗೆ ಸರ್ಪದ ಬುಟ್ಟಿಯನ್ನು ಕಳುಹಿಸಿದಾಗ ಅದು ಆಕೆಗೆ ಒಂಬತ್ತು ಅಡಿಗಳ ಹಾರವಾಯಿತು ಈ ರೀತಿಯ ಅನೇಕ ಹೇಳಿಕೆಗಳು ಸಮಾಜದಲ್ಲಿ ಪ್ರಚಲಿತದಲ್ಲಿವೆ. ಅದರಿಂದ ಮೀರಾ ತನ್ನ ಗಾಢ ಭಕ್ತಿ ಪುರಸ್ಸರ ಆದರ್ಶ ಮತ್ತು ಅದಕ್ಕಾಗಿ ಸಂಘರ್ಷ ನಡೆಸಿದ ಕಾರಣ ಜನಸಮುದಾಯದಲ್ಲಿ ಗೌರವ ಮತ್ತು ಆದರಕ್ಕೆ ಪಾತ್ರಳಾಗಿದ್ದಳು ಎಂಬುದು ಸ್ಪಷ್ಟವಾಗುತ್ತದೆ.

ಮೀರಾಳ ಜೀವನಕ್ಕೆ ಸಂಬಂಧಿಸಿದ ಸಾಕ್ಷ್ಯಗಳ ಅಧ್ಯಯನದಿಂದ ಮೀರಾಳ ಮಹತ್ವ ರಾಜಕೀಯ ಶಕ್ತಿಯ ಬಲದಲ್ಲಿರಲಿಲ್ಲ, ಆರ್ಥಿಕ ಮತ್ತು ಸಾಂಪ್ರದಾಯಿಕ ಶಕ್ತಿಯನ್ನೂ ಆಧರಿಸಿ ಇರಲಿಲ್ಲ, ಆದರೆ ಭಕ್ತಿಯ ತನ್ಮಯತೆ, ಭಾವುಕತೆ, ಸಮರ್ಪಣೆ, ಸಂಘರ್ಷ ಮತ್ತು ಅತ್ಯಾಚಾರಗಳಲ್ಲಿರುವ ಸ್ಥಿರತೆಗೆ ಕಾರಣವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಮೇಲಿನ ಸತ್ಯತೆಗಳ ಆಧಾರದಲ್ಲಿ ಮೀರಾಳ ಜೀವನದ ಸಾರಾಂಶ ಈ ಕೆಳಗಿನಂತಿದೆ :

೧) ಮೀರಾಳ ಜನ್ಮತಿಥಿ ಶ್ರಾವಣ ಶುಕ್ಲಪಕ್ಷ । ಶುಕ್ರವಾರ ಸಂ ೧೫೬೧ ಎಂದು ನಿರ್ಧಾರ ಮಾಡಬಹುದಾಗಿದೆ.

೨) ಮೀರಾ ಮೇಡತಿಯಾದ ರಾಠಾರ್ ವಂಶದವಳು. ರಾವ್ದೂದಾರನ ಪುತ್ರ ರತ್ನಸಿಂಹನ ಮಗಳು.

೩) ಮೀರಾಳ ತಾಯಿಯ ಬಗ್ಗೆ ನಿಶ್ಚಿತವಾದ ಐತಿಹಾಸಿಕ ಪ್ರಮಾಣಗಳು ಸಿಗುವುದಿಲ್ಲ. ಆದರೂ ಮೀರಾ ೨ ವರ್ಷದ ಮಗುವಾಗಿದ್ದಾಗ ಆಕೆಯ ತಾಯಿ ಸ್ವರ್ಗಸ್ಥಳಾದಳು ಎಂಬುದು ಖಚಿತ.

೪) ಮೀರಾಳ ಶಿಕ್ಷಣ, ಪಾಲನೆ, ಪೋಷಣೆ ರಾವ್‌ದೂದಾರ ಮೇಲ್ವಿಚಾರಣೆಯಲ್ಲಿ ಆಗಿತ್ತು. ಮೀರಾಳ ಅಂತರಂಗದ ಸಖಿಯ ಹೆಸರು ಲಲಿತ. ರಾವ್‌ದೂದಾಜಿಯ ಭಕ್ತಿ ಮೀರಾಳ ಮೇಲೆ ಅಪಾರವಾದ ಪ್ರಭಾವವನ್ನು ಬೀರಿತು.

೫) ಮೀರಾಳ ಬಾಲ್ಯದ ಬಗ್ಗೆಯೂ ಅನೇಕ ಐತಿಹ್ಯಗಳು ಪ್ರಚಲಿತದಲ್ಲಿವೆ. ಇದರಿಂದ ಆಕೆಯ ಕೃಷ್ಣಭಕ್ತಿಯ ಅನನ್ಯತೆಯ ಪರಿಚಯ ಸಿಗುತ್ತದೆ. ಆರಂಭಿಕ ಜೀವನದ ಸಂಸ್ಕಾರಗಳಿಂದಾಗಿಯೇ ಆಖೆ ಜೀವನದ ಸಂಘರ್ಷಗಳನ್ನು ಎದುರಿಸಲು ಸಾಧ್ಯವಾಯಿತು.

೬) ಮೀರಾಳ ರೂಪ, ಯೌವನ ಮತ್ತು ವೈಧವ್ಯದ ಜೊತೆಗೆ ಆಕೆಯ ನಿರ್ಭೀತ ಸ್ವತಂತ್ರ ಮನೋಧರ್ಮ ಸಾಧು-ಸಂತರ ಸಂಪರ್ಕ ಇತ್ಯಾದಿಗಳಿಂದಾಗಿ ಉಂಟಾದ ಅಪನಂಬಿಕೆಯಿಂದ ರಾಣಾ ಕೋಪಗೊಳ್ಳುತ್ತಾನೆ. ಅದರ ಪರಿಣಾಮವಾಗಿ ಮೀರಾ ಅನೇಕ ಕಷ್ಟಗಳನ್ನು ಎದುರಿಸಬೇಕಾಯಿತು.

೭) ಮೀರಾಳ ವಿವಾಹ ಸಂ. ೧೫೭೩ರಲ್ಲಿ ರಾಣಾ ಸಾಂಗಾನ ಪುತ್ರ ಭೋಜರಾಜನ ಜೊತೆ ನಡೆಯಿತು. ವಿವಾಹದ ಸ್ವಲ್ಪ ಸಮಯದ ನಂತರ ಭೋಜರಾಜ ಸ್ವರ್ಗಸ್ಥರಾದನು.

೮) ಮೀರಾಳ ವಿಷಪ್ರಾಶನ ವಿಷಯ ಜನಮಾನಸದಲ್ಲಿ ಸತ್ಯವೆಂದು ತಿಳಿಯಲಾಗಿದೆ. ಹಾಗಾಗಿ ಇಂದಿಗೂ ಸಹ ಮಾರ್ವಾಡಿಯ ಬೀಜವರ್ಗಿ ಸಮುದಾಯದಲ್ಲಿ ಆಕೆಯ ಶಾಪದಲ್ಲಿ ನಂಬಿಕೆಯಿದೆ.

೯) ಬಾಲ್ಯಜೀವನದಲ್ಲಿ ಲಭ್ಯವಾದ ಭಕ್ತಿಯ ಸಾತ್ವಿಕ ಸಂಸ್ಕಾರ, ಆದರೆ ನಂತರದ ಜೀವನದಲ್ಲಿ ರಾಜಮನೆತನದ ಮೋಸ, ಭವಜಾಲಗಳ ಜಂಜಾಟದಿಂದ ಆಕೆಯಲ್ಲಿ ವೈರಾಗ್ಯದ ಭಾವನೆ ಹುಟ್ಟಿಕೊಂಡಿತು. ಕೊನೆಗೆ ದುಃಖದಿಂದ ಸಂ.೧೫೯೧ ಸುಮಾರಿಗೆ ಆಕೆ ಚಿತ್ತೌಡನ್ನು ಪರಿತ್ಯಜಿಸಿದಳು.

೧೦) ಮೀರಾಳು ಪುಸ್ಕರ, ವೃಂದಾವನ ಮತ್ತು ಡಾಕೋರ್‌ನ ಯಾತ್ರೆ ಮಾಡಿದಳು. ತನ್ನ ತೀರ್ಥ ಯಾತ್ರೆಯ ಈ ಸಮಯದಲ್ಲಿ ಆಕೆಗೆ ಅನೇಕ ಭಗವದ್ಭಕ್ತರನ್ನು ಭೇಟಿಯಾಗುವ ಸದವಕಾಶ ಒದಗಿತು.

೧೧) ಜೀವನದ ಸಂಧ್ಯಾಕಾಲದಲ್ಲಿ ಮೀರಾ ದ್ವಾರಕಾಕ್ಕೆ ಬಂದಿದ್ದಳು. ಇಲ್ಲಯೇ ರಣಛೋಡನ ಭಕ್ತಿಯಲ್ಲಿ ತಲ್ಲೀನಳಾಗಿದ್ದಳು. ರಾಣಾನು ಕಳುಹಿಸಿದ ಪುರೋಹಿತರು ಆಕೆಯನ್ನು ವಾಪಸ್ಸು ಕಳುಹಿಸಲು ಮನೆಯ ಹೊರಗೆ ಧರಣಿ ನಡೆಸಿದಾಗ ಬೇಸತ್ತ ಮೀರಾ ಐಹಿಕ ಶರೀರವನ್ನು ಸಮಾಪ್ತಿಗೊಳಿಸಿದಳು. ಭಕ್ತರ ಹೇಳಿಕೆಯಂತೆ ರಣಛೋಡನ ಮೂರ್ತಿಯಲ್ಲಿ ವಿಲೀನವಾಗಿ ಮೀರಾ ಶರೀರ ಸಹಿತ ಸ್ವರ್ಗಕ್ಕೆ ಹೋದಳು.

ಈ ರೀತಿ ಮೀರಾಳ ಜೀವನಕ್ಕೆ ಸಂಬಂಧಿಸಿದ ಘಟನೆಗಳು, ವಾರ್ತೆಗಳು ಮತ್ತು ಪ್ರಸಂಗಗಳು ಮಹಾಸಾಗರದಲ್ಲಿ ಪ್ರಾಮಾಣಿಕ ಸತ್ಯದ ಶೋಧ ಬಹಳ ಕಷ್ಟದ ಕೆಲಸವೇ ಸರಿ. ಆಕೆಯ ವ್ಯಕ್ತಿತ್ವ ಭಕ್ತಿಯ ಸ್ವರೂಪ ಆತ್ಮನಿವೇದನೆ ಮತ್ತು ಆರಾಧ್ಯದೇವನಲ್ಲಿ ಅಚಲ ಶ್ರದ್ಧೆ ಸಮಾಜದ ಎಲ್ಲಾ ವರ್ಗಗಳ ಮೇಲೂ ಸಾಕಷ್ಟು ಪ್ರಭಾವ ಬೀರಿತ್ತು. ಹಾಗಾಗಿ ಆಕೆಯ ಜೀವನ ಬಗ್ಗೆ ಇರುವ ಯಾವುದೇ ಮಾಹಿತಿಯನ್ನೂ ಅಲ್ಲಗೆಳೆಯುವಂತಿಲ್ಲ, ಹಾಗೆಯೇ ಸತ್ಯವೆಂದು ಒಪ್ಪಿಕೊಳ್ಳವುದೂ ಸಾಧ್ಯವಿಲ್ಲ. ಆದರೂ ಮೇಲಿನ ಸಾಮಗ್ರಿಗಳ, ಮತ್ತು ಮೀರಾಳ ಪದಗಳ ಅಂತರಿಕ ಸಾಕ್ಷ್ಯಗಳಿಂದ ಆಕೆಯ ಜೀವನಕ್ಕೆ ಸಂಬಂಧಿಸಿದಂತೆ ಈ ಮೇಲಿನ ತತ್ವಗಳಿಗೆ ಪುಷ್ಟಿಕೊಡಬಹುದಾಗಿದೆ.

## ಆಕರಸೂಚಿ

**೧. ಎಂ. ಆರ್. ಶ್ರೀನಿವಾಸ ಮೂರ್ತಿ**

ವಚನಧರ್ಮಸಾರ, ಮೈಸೂರು, ೧೯೬೮ ಪುಟ ೧೦೩

**೨. ಡಾ. ಎಲ್. ಬಸವರಾಜು**

ಅಕ್ಕನ ವಚನಗಳು, ವಚನ ೧೯೭೪

**೩. ಡಾ. ಕೃಷ್ಣದೇವ ಶರ್ಮ**

ಭಕ್ತಿಕಾಲೀನ ಕೃಷ್ಣ ಕಾವ್ಯ ಕಾ ಅಧ್ಯಯನ, ೧೯೭೩, ಪುಟ ೨೪೯

ಭಕ್ತಿಕಾಲೀನ ಕೃಷ್ಣಕಾವ್ಯ ಕಾ ಅಧ್ಯಯನ ೧೯೭೩, ಪುಟ ೨೫೧

ಭಕ್ತಿಕಾಲೀನ ಕೃಷ್ಣಕಾವ್ಯ ಕಾ ಅಧ್ಯಯನ, ೧೯೭೩, ಪುಟ ೨೫೪

**೪. ಗುರುಲಿಂಗ ಕಾಪಸೆ, ೧೯೯೬**

ಅಕ್ಕಮಹಾದೇವಿ, ಪುಟ ೧೧

ಅಕ್ಕಮಹಾದೇವಿ, ಪುಟ ೧೩

ಅಧ್ಯಾಯ ೪

# ಅಕ್ಕಮಹಾದೇವಿ ಮತ್ತು ಮೀರಾಬಾಯಿಯ ರಚನೆಗಳಲ್ಲಿ ಭಕ್ತಿಯ ಸ್ವರೂಪ

- ಮಧುರ ಭಕ್ತಿಯ ಅಭಿವ್ಯಕ್ತಿಯ ವಿನ್ಯಾಸ
- ಅಕ್ಕಮಹಾದೇವಿ ಮತ್ತು ಮೀರಾಬಾಯಿಯ ಸಾಹಿತ್ಯಗಳಲ್ಲಿ ಭಕ್ತಿಯ ಸ್ವರೂಪ

# ಅಧ್ಯಾಯ ೪ : ಅಕ್ಕಮಹಾದೇವಿ ಮತ್ತು ಮೀರಾಬಾಯಿಯ ರಚನೆಗಳಲ್ಲಿ ಭಕ್ತಿಯ ಸ್ವರೂಪ

## ೪.೧ : ಮಧುರ ಭಕ್ತಿಯ ಅಭಿವ್ಯಕ್ತಿಯ ವಿನ್ಯಾಸ

ಭಾರತೀಯ ಪರಂಪರೆಯಲ್ಲಿ ನವವಿಧ ಭಕ್ತಿಯ ಕಲ್ಪನೆಯಿದೆ. ಅವುಗಳಲ್ಲಿ ಮಧುರಭಾವವೂ ಒಂದು. ದೇವರನ್ನು ಪುರುಷನೆಂದೂ, ಭಕ್ತನು ದೇವರ ಪತ್ನಿಯೆಂದೂ ಭಾವಿಸುವುದು ಇದರ ಮುಖ್ಯ ನಿಲುವು. ಸೃಷ್ಟಿಯನ್ನು ಹೆಣ್ಣು ಎಂದೂ, ಸೃಷ್ಟಿಕರ್ತನನ್ನು ಗಂಡು ಎಂದೂ ಭಾವಿಸುವ ಪರಂಪರೆಗೆ ಅನುಸಾರವಾಗಿ ಸೃಷ್ಟಿಯ ಭಾಗವಾದ ಮಾನವರೆಲ್ಲ ಸ್ತ್ರೀಪುರುಷರು. ಪಾತಿವ್ರತ್ಯದ ಕಲ್ಪನೆ ತೀವ್ರಗೊಂಡ ಹಿನ್ನೆಲೆಯಲ್ಲಿ ನಿಷ್ಠಾವಂತನಾದ ಭಕ್ತನಿಗೆ ಗಂಡನಾದ ದೇವರನ್ನು ಅನನ್ಯ ಶ್ರದ್ಧೆಯಿಂದ ಸಂಪ್ರೀತಗೊಳಿಸುವುದೇ ಕರ್ತವ್ಯವೆಂಬ ನಂಬಿಕೆ ಬೆಳೆಯಿತು. ಶಿವನನ್ನು ಗಂಡನೆಂದು ಭಾವಿಸಿ ತನ್ನನ್ನು ಹೆಂಡತಿಯೆಂದು ಭಾವಿಸಿ ಆರಾಧನೆ ಮಾಡುವುದೇ ಸತಿಪತಿ ಭಾವ ಅಥವಾ ಶರಣ ಸತಿ-ಲಿಂಗಪತಿ ಭಾವ. ಶರಣ ಸತಿ ಲಿಂಗಪತಿ ಎಂಬ ಭಾವವನ್ನು ಒಳಗೊಂಡ ವಚನಗಳನ್ನು ಅನೇಕ ವಚನಕಾರರು ಬರೆದಿದ್ದಾರೆ. (ಪಿ. ವಿ. ನಾರಾಯಣ; ೧೯೯೭)

ವಚನ ಸಾಹಿತ್ಯದ ಹಾಗೂ ಶರಣ ಧರ್ಮದ ತಾತ್ವಿಕ ದಾರ್ಶನಿಕ ನಿಲುವಿನಲ್ಲಿ ಸತಿ-ಪತಿ ಭಾವಕ್ಕೆ ಹೆಚ್ಚಿನ ಮಹತ್ವವಿದೆ. ಸ್ತ್ರೀಪುರುವರೆನ್ನದೆ ಹೆಚ್ಚಿನ ಎಲ್ಲ ವಚನಕಾರರು ಸತಿ-ಪತಿ ಭಾವಕ್ಕೆ ಮಹತ್ವವನ್ನು ನೀಡಿದ್ದಾರೆ. ಇಲ್ಲಿ ಜೀವ ಶಿವ, ಅಂಗ ಲಿಂಗ ಅವಿನಾಭಾವ ಹೊಂದಿದ್ದರೂ ಇದು ಸತಿ-ಪತಿಯರ ಐಕ್ಯದ ಸಂಬದ್ಧತೆಯನ್ನು ಸೂಚಿಸುತ್ತದೆ. ಈ ಕಾರಣದಿಂದಲೇ ಸತಿ-ಪತಿ ಭಾವಕ್ಕೆ (ಮಧುರ ಭಕ್ತಿಗೆ) ಉಳಿದೆಲ್ಲ ಭಕ್ತಿಗಳಿಗಿಂತ ಹೆಚ್ಚಿನ ಮಹತ್ವ, ಪ್ರಾಶಸ್ತ್ಯ ದೊರೆತಿದೆ.

ಶರಣಧರ್ಮದಲ್ಲಿ ವ್ಯಕ್ತಿನಿಷ್ಠ ವಿಕಾಸ, ಭಕ್ತಿ ಸಾಧನೆ ಆರು ಹಂತಗಳಲ್ಲಿ ವೃದ್ಧಿಹೊಂದುತ್ತದೆ. ಅದನ್ನು ಷಟ್‌ಸ್ಥಲ ವಿಕಾಸ ಎಂದಿದ್ದಾರೆ. ಭಕ್ತ, ಮಾಹೇಶ್ವರ, ಪ್ರಾಣಲಿಂಗ, ಪ್ರಸಾದಿ, ಶರಣ, ಐಕ್ಯ ಎಂದು ಆರು ಹಂತಗಳಲ್ಲಿ ಪರಿಪೂರ್ಣತೆಯನ್ನು ಸಾಧಿಸುವುದು. ಸಾಧಕ ಇಲ್ಲಿ ಒಂದೊಂದೇ ಸ್ಥಲಕಟ್ಟಿನ ಲಕ್ಷಣಗಳಿಗೆ ತನ್ನನ್ನು ಗುರುತಿಸಿಕೊಂಡಿದ್ದರೂ ಆರು ರೀತಿಯ ಪರಿಕ್ರಮಣ ಪರಿಪಕ್ವತೆ ಅವನ ಪರಮ ವಿಕಾಸದ ಗುರಿಯಾಗಿರುತ್ತದೆ. ಭಕ್ತನಿಂಗೆ ವಿಶ್ವಾಸ, ಮಹೇಶ್ವರನಿಗೆ ನಿಷ್ಠೆ, ಪ್ರಸಾದಿಗೆ

ಅರ್ಪಣಾಬಾವ, ಪ್ರಾಣಲಿಂಗಿಗೆ ತನ್ಮಯತೆ, ಶರಣನಿಗೆ ಐಕ್ಯದ ಸಾಧನೆಯ ಏಕಭಾವ. ಈ ಆರು ಕ್ರಿಯಾ ಮಥನ ವ್ಯಕ್ತಿಯ ವಿಕಸನಕ್ಕೆ, ಭಕ್ತಿಸಾಧನೆಗೆ ಅತಿ ಅಗತ್ಯ.

ಸಾಮಾನ್ಯವಾಗಿ ಶರಣರಲ್ಲಿ ಭಕ್ತಿಗೆ ಬಸವಣ್ಣ, ಮಾಹೇಶ್ವರಕ್ಕೆ ಮಡಿವಾಳ ಮಾಚಿದೇವ, ಪ್ರಸಾದಿ ಸ್ಥಲಕ್ಕೆ ಚೆನ್ನಬಸವಣ್ಣ, ಪ್ರಾಣಲಿಂಗಿ ಸಾಧನೆಗೆ ಅಜಗಣ್ಣ, ಶರಣ ಸ್ಥಲಕ್ಕೆ ಅಕ್ಕಮಹಾದೇವಿ, ಐಕ್ಯಸ್ಥಲಕ್ಕೆ ಅಲ್ಲಮನನ್ನು ಗುರುತಿಸುತ್ತಾ ಅವರವರ ಸಾಧನೆಯ ವಿಶೇಷತೆಗಳನ್ನು ಎತ್ತಿ ತೋರಿಸುತ್ತಾರೆ.

ಶರಣ ಸ್ಥಲಕ್ಕೆ ಅಕ್ಕಮಹಾದೇವಿಯ ಹೆಸರನ್ನು ಎಲ್ಲ ಶರಣರು ಗುರುತಿಸಿ ಹೊಗಳಿರುವುದು ಹೆಣ್ಣಿಗೆ ಸಹಜವಾದ ಗುಣಗಳನ್ನು ಹೊಂದಿದ್ದಾಳೆಂಬ ಅಂಶ ಪ್ರಮುಖವಾಗಿರುವುದರಿಂದ. ಅಂತೆಯೇ ಇತರ ವಚನಕಾರರೂ ಸಹ. ಒಮ್ಮೊಮ್ಮೆ ಅತಿ ಗೌರವಭಾವದಲ್ಲಿ ತಮ್ಮ ವಿರಹ–ಮಿಲನ–ಸಮರಸಗಳ ಭಾವ ಸಮೃದ್ಧಿಯನ್ನು ಭಕ್ತಿಯಲ್ಲಿಯೇ ಬಿಂಬಿಸಿರುವುದು ಕಾಣುತ್ತೇವೆ. ಇದು ಜೀವಿಯ ಐಕ್ಯತೆಗಾಗಿ ಜೀವವು ದೇವರೊಡನೆ ಒಂದಾಗಲು ಹಂಬಲಿಸುವ, ಆತುರಗೊಳ್ಳುವ ಭಾವದ ಪರಾಕಾಷ್ಠೆಯ ಒಂದು ಹಂತ. ಈ ಹಂತದಲ್ಲಿ ತಾನು ಎಂದರೆ ಭಕ್ತಿ, ತನ್ನ ಎಲ್ಲ ಭೋಗ–ಉಪಭೋಗಗಳ, ತನುಮನಗಳ ಜೊತೆಗೆ ತಾನು ಹೊಂದಿದ ಸತಿತನವನ್ನು ಸಹ ಪರಮಾತ್ಮನಿಗೆ ಅಥವಾ ಲಿಂಗಕ್ಕೆ ಸಮರ್ಪಿಸಬೇಕು. ಈ ಸಮರ್ಪಣೆಯ ಅಂಥ ಸ್ಥೂಲವಾಗಿ, ವಿವರ ವಿವರವಾಗಿ, ಸೂಕ್ಷ್ಮವಾಗಿ, ಒಗಟಿನಂತೆ ನಿಗೂಢವಾಗಿಯೂ, ಒಮ್ಮೊಮ್ಮೆ ವ್ಯಾಪಕವಾಗಿ ಸಾಮಾಜಿಕ, ನೈತಿಕ ಹಾಗೂ ಆಂತರಿಕ ಆತ್ಮನಿಷ್ಠವಾದ ಅರ್ಥಗಳನ್ನು ಬಿಂಬಿಸುತ್ತಲೇ ವಚನಗಳಲ್ಲಿ ಬೆಳೆದಿರುವುದನ್ನು ನಾವು ಕಾಣುತ್ತೇವೆ.

ಅಕ್ಕಮಹಾದೇವಿ ಸ್ವಾಭಿಮಾನ–ಸ್ವಾತಂತ್ರ್ಯಾಪೇಕ್ಷೆಗಳ ಪ್ರತೀಕವಾಗಿದ್ದಾಳೆ. ಸಮಾಜದಲ್ಲಿ ಹೆಣ್ಣಿನ ಮೇಲೆ ಗಂಡು ಹಿಡಿತವನ್ನು ಸಾಧಿಸುವ ದರ್ಪಕ್ಕೆ ಅವಳು ತೋರಿದ ಪ್ರತಿಭಟನೆ ಅಸಾಮಾನ್ಯವಾದುದು. ಹೆಣ್ಣೊಬ್ಬಳು ಗಂಡಸನ್ನು ತೊರೆದು ಒಂಟಿಯಾಗಿ ಬದುಕುವಾಗ ಅನೇಕ ಸಮಸ್ಯೆಗಳನ್ನು ಎದುರಿಸುವುದು ಸರ್ವೇಸಾಮಾನ್ಯ. ಆದರೆ ಆಕೆ ಲೌಕಿಕ ಗಂಡನನ್ನು ತ್ಯಜಿಸಿದರೂ ಚೆನ್ನಮಲ್ಲಿಕಾರ್ಜುನನನ್ನು ಗಂಡನೆಂದು ಸ್ವೀಕರಿಸಿದ್ದು ಆಕೆಗೆ ರಕ್ಷಣೆಯನ್ನು ನೀಡಿರಬೇಕು. ಅಂತೆಯೇ ಅವಳು ತೊರೆದದ್ದು ಭವಿಯಾದ ಗಂಡನನ್ನಾದ್ದರಿಂದ ಭಕ್ತ ಸಮೂಹ ಆಕೆಯನ್ನು ಆವರಿಸಿತು. ಹೆಂಗಸಿಗೆ ಇದ್ದರೆ ಗಂಡನೇ ದೇವರು, ಇಲ್ಲದಿದ್ದರೆ ದೇವರೇ ಗಂಡ ಎಂಬ ಸಾಮಾಜಿಕ ಪರಿಸ್ಥಿತಿಯಲ್ಲಿ ಆಕೆ ಬದುಕಿದ್ದವಳು. ಹಾಗಾಗಿ ಲೌಕಿಕ ಗಂಡನನ್ನು ತ್ಯಜಿಸಿದ ನಂತರ ಶಿವನನ್ನು ಗಂಡನೆಂದು ಭಾವಿಸಿದ್ದು ಆಕೆಗೆ ಅನಿವಾರ್ಯವಾಗಿರಬೇಕು.

ಶರಣಸತಿ ಲಿಂಗಪತಿಯ ಪರಿಕಲ್ಪನೆಗೆ ಮಾನ್ಯತೆ ನೀಡಿದ ವೀರಶೈವರಲ್ಲಿ ಗಂಡನೇ ಹೆಂಗಸೆಂದು ಭಾವಿಸಬೇಕಾದಾಗ, ವಾಸ್ತವದಲ್ಲಿ ಸ್ತ್ರೀಯೇ ಆದ ಅಕ್ಕಮಹಾದೇವಿಯು ಚೆನ್ನಮಲ್ಲಿಕಾರ್ಜುನನನ್ನು ಗಂಡನೆಂದು ಭಾವಿಸಿ ಹಾಡಿದ ಅನೇಕ ವಚನಗಳಿವೆ. ಭಾರತೀಯ ಪರಂಪರೆಯಲ್ಲಿ ಹೆಣ್ಣು ಗಂಡನ ವಿಷಯದಲ್ಲಿ ಹೊಂದಿರುವ ಭಾವನೆಯನ್ನು ಗಂಡಸಾದ ಭಕ್ತ ತಾನು ಶಿವನ ಹೆಣ್ಣೆಂದು ಭಾವಿಸಿಕೊಳ್ಳುವುದು ಸಂಪೂರ್ಣ ಸಾಧ್ಯವಿಲ್ಲ. ಯಾಕೆಂದರೆ ಪಾತಿವ್ರತ್ಯದ ಕಲ್ಪನೆಯ ಹಿನ್ನೆಲೆಯಲ್ಲಿ ಹೆಣ್ಣು ಗಂಡನ ಬಗ್ಗೆ ಹೊಂದಿರುವ ಅನುಭವ ಸೂಕ್ಷ್ಮಗಳ ಎಲ್ಲ ಪದರಗಳನ್ನು ಗಂಡಸಿಗೆ ಒಮ್ಮೆಲೇ ಅನುಭವಿಸುವುದು ಸಾಧ್ಯವಿಲ್ಲ. ಅಲ್ಲದೆ ಅಕ್ಕಮಹಾದೇವಿಯಂತಹವರು ಐಹಿಕ ನೆಲೆಯಲ್ಲಿ ಯಾವುದೇ ಕಾರಣದಿಂದಾಗಲೀ ತೃಪ್ತಿ ಹೊಂದದ ಲೈಂಗಿಕತೆಯನ್ನು ಭಕ್ತಿರೂಪದಲ್ಲಿ ಉದಾತ್ತೀಕರಿಸುವುದು ಸಾಧ್ಯವಾಗುವಷ್ಟು ಸುಲಭಸಹಜವಾಗಿ ಗಂಡಸಿಗೆ ಸಾಧ್ಯವಾಗಲಿಕ್ಕಿಲ್ಲ. ಹಾಗಾಗಿ ಅನೇಕ ವಚನಕಾರರು ಸತಿಪತಿ ಭಾವದ ವಚನಗಳನ್ನು ಬರೆದಿದ್ದರೂ ಅವು ಅಕ್ಕಮಹಾದೇವಿಯ ವಚನಗಳಂತೆ ಓದುಗರನ್ನು ಗಾಢವಾಗಿ ತಟ್ಟಲಾರವು.

ಭಕ್ತಚೇತನವು ಎಲ್ಲೆಡೆಯೂ ತುಂಬಿದೆಯೆಂದು ನಂಬಲಾದ ಪರಮಾತ್ಮನನ್ನು ಕಾಣಲು ಹೋದಾಗ ಹಂಬಲಿಸುವ ರೀತಿ ಈ ಕೆಳಗಿನಂತಿದೆ:

ವನವೆಲ್ಲ ನೀನೆ
ವನದೊಳಗಣ ದೇವತರುವೆಲ್ಲ ನೀನೆ
ತರುವಿನೊಳಗಾಡುವ ಖಗಮೃಗವೆಲ್ಲ ನೀನೆ
ಚೆನ್ನಮಲ್ಲಿಕಾರ್ಜುನಾ
ಸರ್ವಭರಿತನಾಗಿ ಎನಗೇಕೆ ಮುಖದೋರೆ !

ಅತ್ಯಂತ ಸ್ಥೂಲದಿಂದ ಸೂಕ್ಷ್ಮತೆಯ ರೂಪದಲ್ಲಿ ದೇವರನ್ನು ಗುರುತಿಸುತ್ತ ಹೋಗುವ ಈ ವಚನವು ದೇವರನ್ನು ಕಾಣಲು ಅಗತ್ಯವಾದ ದೃಷ್ಟಿಯ ಪ್ರಾಮುಖ್ಯವನ್ನೂ ಸೂಚಿಸುತ್ತದೆ. ಸಂಸಾರದಲ್ಲಿದ್ದು ಅದರಿಂದ ದೂರವಾಗಬೇಕೆಂಬ ಹಂಬಲ ಕೇವಲ ಆದರ್ಶವಾಗಿರದೆ ಅಕ್ಕಮಹಾದೇವಿಯಲ್ಲಿ ಅನಿವಾರ್ಯವಾದ ಪರಿಸ್ಥಿತಿಯೇ ಆಯಿತು. ಸಮಾಜದ ನೀತಿನಿಯಮಗಳಿಂದಾಗಿ ಹೆಣ್ಣಾಗಿ ನೋವನುಭವಿಸಬೇಕಾದ ಪರಿಸ್ಥಿತಿಯಲ್ಲಿ ಆಕೆ ಪ್ರಕೃತಿಯಲ್ಲಿ ದೇವರ ಹುಡುಕಾಟ ನಡೆಸಿದಳು. ಆಕೆಯ ಮಾತುಗಳು ಧೈರ್ಯದ ಪ್ರತೀಕ –

ಕಾಣುತ್ತ ಕಾಣುತ್ತ ಕಂಗಳ ಮುಚ್ಚಿದೆ ನೋಡವ್ವಾ
ಕೇಳುತ್ತ ಕೇಳುತ್ತ ಮೈಮರೆದೊರಗಿದೆ ನೋಡವ್ವಾ

ಹಾಸಿದ ಹಾಸಿಗೆಯ ಹಂಗಿಲ್ಲದೆ ಹೋಯಿತ್ತು ಕೇಳವ್ವಾ
ಚೆನ್ನಮಲ್ಲಿಕಾರ್ಜುನ ದೇವರ ದೇವನ ಕೂಡುವ ಕೂಟದ
ನಾನೇನೆಂದರಿಯದೆ ಮರೆದೆ ಕಾಣವ್ವಾ

ಭಕ್ತಚೇತನವು ಶಿವ ಸಾನಿಧ್ಯದಲ್ಲಿ ಪಡೆಯುವ ಇಂದ್ರಿಯದ ಅನುಭವಗಳು ಐಂದ್ರಿಯಾತೀತವಾಗುವ ಇಂದ್ರಜಾಲಿಕತೆಯನ್ನು ಈ ವಚನವು ಲೈಂಗಿಕ ಪ್ರತಿಮೆಯನ್ನು ಮೂಲಕ ಅದ್ಭುತವಾಗಿ ವ್ಯಕ್ತಪಡಿಸುತ್ತದೆ. ಓೀಗೆ ಆಕೆ ಅತ್ಯಂತ ನವಿರಾದ ಭಾವನೆಗಳನ್ನು ಸಮರ್ಪಕ ಕಾವ್ಯವಾಗಿಸುವುದರಲ್ಲಿ ಸಮರ್ಥಳಾಗಿದ್ದಾಳೆ. ಆದ್ದರಿಂದ ಆಕೆ ತನ್ನ ದಿಟ್ಟ ನಿಲುವು, ಗಂಭೀರ ರಚನೆಗಳೆರಡರಲ್ಲಿಯೂ ಅದ್ವಿತೀಯಳು.

ಪರಮಾತ್ಮನ ಪ್ರೇಮ, ಆನಂದ ಮತ್ತು ಸೌಂದರ್ಯವನ್ನು ತೆಗೆದುಕೊಂಡು ಅದಕ್ಕೆ ಅನೇಕ ರೂಪಗಳ ಕಲ್ಪನೆ ಮಾಡಲಾಯಿತು. ಅವತಾರವಾದದ ಮೂಲದಲ್ಲಿಯೂ ಸಹ ಪರಮಾತ್ಮನ ನಿತ್ಯನವೀನ ಶಕ್ತಿಯ ಭಾವನೆಯೇ ಇತ್ತು. ಎಲ್ಲಾ ಅವತಾರಗಳು ತಮ್ಮ ರೂಪ, ಗುಣ, ಶಕ್ತಿ, ಸಾಹಸ ಮತ್ತು ಚಾತುರ್ಯದ ನಿತ್ಯನವೀನ ರೂಪದಿಂದ ಭಕ್ತರನ್ನು ಪ್ರೇರೇಪಿಸುತ್ತಾ ಬಂದಿದೆ. ಭಾಗವತ ಧರ್ಮದ ಮೂಲತತ್ತ್ವಜ್ಞಾನದಲ್ಲಿ ಪರಮೇಶ್ವರನನ್ನು ವಾಸುದೇವ, ಜೀವನವನ್ನು ಸಂಕರ್ಷಣ, ಮನಸ್ಸನ್ನು ಪ್ರದ್ಯುಮ್ನ ಹಾಗೂ ಅನಿರುದ್ಧನನ್ನು ಅಹಂಕಾರದ ಪ್ರತಿರೂಪ ಎನ್ನಲಾಗಿದೆ. ಜೀವನಕ್ಕೆ ರಾಮ ಮತ್ತು ಕೃಷ್ಣನ ರೂಪದಲ್ಲಿ ಎರಡು ಆಧಾರಗಳು ಸಿಕ್ಕಿದವು. ಅವತಾರದಲ್ಲಿ ರಾಮ ಮತ್ತು ಕೃಷ್ಣನಿಗೆ ಪ್ರಾಮುಖ್ಯ ಸಿಕ್ಕಿತು. ಭಾರತೀಯ ಜೀವನ, ಧರ್ಮ ಮತ್ತು ದರ್ಶನದ ಎಲ್ಲಾ ಕ್ಷೇತ್ರಗಳಲ್ಲೂ ಈ ಎರಡು ರೂಪಗಳ ವಿಕಾಸ ಮತ್ತು ಪ್ರಚಾರ ಎಷ್ಟು ಆಯಿತೆಂದರೆ ಇಂದು ಇವರಿಬ್ಬರನ್ನು ಭಾರತೀಯ ಜೀವನದ ಆಧಾರ ಎನ್ನಲಾಗುತ್ತಿದೆ.

ವೈಷ್ಣವ ಧರ್ಮದ ಭಾವನೆ ಮುಖ್ಯವಾಗಿ ಪ್ರವೃತ್ತಿ ಮೂಲಕ ಮತ್ತು ಆನಂದವಿಧಾಯಕದ್ದಾಗಿದೆ. ವಿಷ್ಣುವಿನ ವಿಭಿನ್ನ ಅವತಾರಗಳಲ್ಲಿ ನಂಬಿಕೆಯಿಡುವ ವೈಷ್ಣವ ಧರ್ಮದ ಜೀವನಕ್ಕಾಗಿ ಕಾಲಕ್ಕನುಸಾರವಾಗಿ ಅನೇಕ ಆದರ್ಶ ಸ್ವರೂಪಗಳನ್ನು ನೀಡಲಾಗಿದೆ. ಇದರಲ್ಲಿ ಪರಮಾತ್ಮನ ಮೂರು ಗುಣಗಳು – ಶೀಲ, ಶಕ್ತಿ ಮತ್ತು ಸೌಂದರ್ಯವನ್ನು ರಾಮನಲ್ಲಿ ಸಮನ್ವಯ ಮಾಡಲಾಗಿದೆ. ರಾಮನಲ್ಲಿ ಲೋಕಮರ್ಯಾದೆ, ಕರ್ತವ್ಯನಿಷ್ಠೆ ಮತ್ತು ಆತ್ಮಸಂಯಮಕ್ಕೆ ಪ್ರಾಮುಖ್ಯತೆ ಇತ್ತು. ಅಲ್ಲಿ ಶೀಲ ಮತ್ತು ಶಕ್ತಿಯ ಪ್ರಶಂಸೆ ಹೆಚ್ಚಾಯಿತು. ಆದರೆ ಸೌಂದರ್ಯದ ಚರಮೋತ್ಕರ್ಷ ಕೃಷ್ಣನಲ್ಲಿ ಕಾಣಸಿಗುತ್ತದೆ. ಕೃಷ್ಣನಲ್ಲಿ ಪ್ರೇಮ ಮತ್ತು ಆನಂದದ ಚರಮೋತ್ಕರ್ಷ ನೋಡಲ್ಪಟ್ಟಿತು. ರಾಮನ ಶೀಲ ಮತ್ತು ಶಕ್ತಿಯ ಸಾಧನೆಯಲ್ಲಿ ಶ್ರದ್ಧೆಯ ಉತ್ಪನ್ನ ಮಾಡಿ ದಾಸ್ಯಭಾವದ ಭಕ್ತಿಯನ್ನು

ಹುಟ್ಟಿಸುತ್ತದೆ. ಆದರೆ ಕೃಷ್ಣನ ಪ್ರೇಮ, ಸೌಂದರ್ಯ, ಮಾಧುರ್ಯ ಮತ್ತು ಆನಂದ ಮನಸ್ಸಿನಲ್ಲಿ ಆಸಕ್ತಿಯನ್ನು ಹುಟ್ಟಿಸಿತು. (ಡಾ. ಕೃಷ್ಣದೇವ ಶರ್ಮ : ೧೯೭೩) ವಾತ್ಸಲ್ಯ, ಸಖ್ಯ ಹಾಗೂ ಮಧುರ ಭಾವಯುಕ್ತ ಭಕ್ತಿಯ ಸಾಕಾರ ಕೃಷ್ಣಭಕ್ತಿ ಶಾಖೆಯಲ್ಲಿ ಆಯಿತು. ಈ ಕಾರಣದಿಂದಲೇ ಕೃಷ್ಣಭಕ್ತಿ ಶಾಖೆಯ ಪ್ರಚಾರ ಮತ್ತು ಪ್ರಸಾರ ಅಧಿಕವಾಯಿತು.

ಕೃಷ್ಣಭಕ್ತಿ ಶಾಖೆಯಲ್ಲಿ ಪ್ರೇಮಲಕ್ಷಣ ಮಾಧುರ್ಯ ಭಕ್ತಿಗೆ ಪ್ರಾಮುಖ್ಯತೆಯನ್ನು ನೀಡಲಾಯಿತು. ರೂಪಾಸಕ್ತಿ ಹಾಗೂ ಸೌಂದರ್ಯಾಸಕ್ತಿಯನ್ನು ಪ್ರೋತ್ಸಾಹಿಸುವ ಭಕ್ತಕವಿಗಳು ತಮ್ಮ ಆರಾಧ್ಯನನ್ನು ಅನೇಕ ದೃಷ್ಟಿಯಿಂದ ತಮ್ಮ ಪ್ರೇಮ ಮತ್ತು ಭಕ್ತಿಯ ಆಧಾರವಾಗಿಸಿದರು. ಬಹುಶಃ ಪ್ರೇಮ ಮತ್ತು ಅನುರಾಗದ ಯಾವುದೇ ಪಾರ್ಶ್ವವನ್ನೂ ಈ ಕವಿಗಳು ಬಿಡಲೇ ಇಲ್ಲ. ಮೊದಮೊದಲ ಕೃಷ್ಣಭಕ್ತರ ಮೂಲಕ ಪ್ರತಿಪಾದಿಸಲ್ಪಟ್ಟ ರೂಪದ ಹೊರತಾಗಿ ಮೀರಾಳು ಕೇವಲ ಮಾಧುರ್ಯವನ್ನು ಮಾತ್ರ ತನ್ನದಾಗಿಸಲಿಲ್ಲ. ಬದಲಾಗಿ ಅದನ್ನು ಸ್ವಾಭಾವಿಕವಾಗಿ ಪೂರ್ಣಗೊಳಿಸಿದಳು. ಮೀರಾಳು ತನ್ನ ಆರಾಧ್ಯ ಸ್ವರೂಪವನ್ನು ಪ್ರತಿಪಾದಿಸಿದ ರೀತಿಯನ್ನು ಅರಿಯುವ ಮೊದಲು ಅನ್ಯ ಕೃಷ್ಣಭಕ್ತರು ಪ್ರತಿಪಾದಿಸಿದ ಸ್ವರೂಪದ ಕಡೆಗೆ ಗಮನಹರಿಸಬೇಕಾಗುತ್ತದೆ. ಆ ಕಾಲದಲ್ಲಿ ಕೃಷ್ಣ ಭಕ್ತಿ ಧಾರೆಯಲ್ಲಿ ಮುಖ್ಯವಾಗಿ ಈ ಕೆಳಗಿನ ಸಂಪ್ರದಾಯಗಳಿಗೆ ಮಹತ್ವವನ್ನು ನೀಡಲಾಗಿತ್ತು – ಶ್ರೀ ವಲ್ಲಭಾಚಾರ್ಯರ ಪುಷ್ಟಿ ಸಂಪ್ರದಾಯ, ಶ್ರೀ ಚೈತನ್ಯ ಮಹಾಪ್ರಭುಗಳ ಗೌಡೀಯ ಸಂಪ್ರದಾಯ, ಶ್ರೀ ಹಿತಹರಿವಂಶರ ರಾಧಾವಲ್ಲಭ ಸಂಪ್ರದಾಯ, ಶ್ರೀ ಹರಿದಾಸರ ಸಖೀ ಸಂಪ್ರದಾಯ, ಶ್ರೀ ನಿಂಬಾರ್ಕ ಸಂಪ್ರದಾಯ ಮೊದಲಾದವು.

ಮೊತ್ತಮೊದಲು ಆಲ್ವಾರ್ ಸಂತರು ರಾಗಾನುಭಕ್ತಿಯ ಪ್ರಚಾರ ಮಾಡಿದರು. ಇವರ ನಂತರ ಆಚಾರ್ಯರ ಪರಂಪರೆ ಪ್ರಚಲಿತವಾಯಿತು. ಇವರು ದಾರ್ಶನಿಕ ಆಧಾರದಲ್ಲಿ ಭಕ್ತಿಯ ನಿರೂಪಣೇ ಮಾಡುತ್ತಾ ಶ್ರೀಕೃಷ್ಣನ ರೂಪವನ್ನು ಚಿತ್ರಿಸಿದರು. ಉತ್ತರಭಾರತದಲ್ಲಿ ಸರ್ವಪ್ರಥಮವಾಗಿ ನಿಂಬಾರ್ಕಾಚಾರ್ಯರು ರಾಧಾ–ಕೃಷ್ಣ ಭಕ್ತಿಯನ್ನು ತೋರಿಸಿಕೊಟ್ಟರು. ಇವರ ಸಂಪ್ರದಾಯ 'ಸನಕ ಸಂಪ್ರದಾಯ' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಕೃಷ್ಣೋಪಾಸನೆಯಲ್ಲಿ ರಾಧಳಿಗೆ ಪ್ರಾಧಾನ್ಯತೆಯನ್ನು ನೀಡಿ ಮಧುರಭಕ್ತಿಯನ್ನು ಸಬಲಗೊಳಿಸಿದರು. ಕೃಷ್ಣಭಕ್ತಿಯ ವ್ಯಾಪಕತೆ, ಸಂಪೂರ್ಣತೆ ಮತ್ತು ಪ್ರಭಾವೋತ್ಪಾದಕತೆಯ ದೃಷ್ಟಿಯಿಂದ ಮಹಾಪ್ರಭು ವಲ್ಲಭಾಚಾರ್ಯರು ಮತ್ತು ಅವರ ಪುಷ್ಟಿಮಾರ್ಗ ಪ್ರಮುಖವಾದುದು. ಜಗತ್ತಿನಲ್ಲಿ ಆಸಕ್ತಿ ಇರುವ ತನಕ ಕೃಷ್ಣ ಭಕ್ತಿ ಅಸಾಧ್ಯ ಎಂಬುದು ಅವರ ನಂಬಿಕೆಯಾಗಿತ್ತು. ಅವರು ಮಾನಸಿ, ತನುಜ, ವಿತಜ ಮೊದಲಾದ ಸೇವೆಗಳ ಮೂಲಕ ಪ್ರೇಮಲಕ್ಷಣ ಭಕ್ತಿಗೆ ಮಹತ್ವವನ್ನು ನೀಡಿದರು. (ಡಾ. ಕೃಷ್ಣದೇವ ಶರ್ಮ, ೧೯೭೩)

ಅವರು ಸ್ವರೂಪಾಸಕ್ತಿ, ಲೀಲಾಸಕ್ತಿ ಹಾಗೂ ಭಾವಾಸಕ್ತಿಗೆ ವಿಶೇಷವಾದ ಮಹತ್ವವನ್ನು ನೀಡಿದರು. ವಾತ್ಸಲ್ಯ ಮತ್ತು ಮಧುರ ಭಾವದಲ್ಲಿ ಭಕ್ತಿ ಇದರ ಪ್ರಮುಖ ಲಕ್ಷಣ.

ಚೈತನ್ಯ ಮಹಾಪ್ರಭುಗಳ ಗೌಡೀಯ ಸಂಪ್ರದಾಯದಲ್ಲಿ ಬಾಹ್ಯ ವಿಧಿ-ವಿಧಾನ ಅಥವಾ ಬಾಹ್ಯ ರೂಪಕ್ಕೆ ಬದಲಾಗಿ ಭಾವಪಕ್ಷಕ್ಕೆ ಪ್ರಾಮುಖ್ಯವನ್ನು ನೀಡಲಾಯಿತು. ಅವರು ಯಾವುದೇ ರೀತಿಯ ದಾರ್ಶನಿಕ ವಿವೇಚನೆ ಹಾಗೂ ಸಂಪ್ರದಾಯಿಕ ಸಂಘಟನೆಯನ್ನು ಮಾಡಲಿಲ್ಲ. ಇವರು ಉಚ್ಚಕೋಟಿಯ ಭಕ್ತರಾಗಿದ್ದರು. ಭಗವಂತನ ಪ್ರೇಮದಲ್ಲಿ ಮಗ್ನರಾಗಿ ಕೀರ್ತನೆಗಳನ್ನು ನಡೆಸುತ್ತಿದ್ದರು. ಈ ಮತದಲ್ಲಿ ರಾಧೆಗೆ ವಿಶೇಷ ಮಹತ್ವವನ್ನು ನೀಡಲಾಗಿತ್ತು. ಇಲ್ಲಿ ಮಾಧುರ್ಯ ಭಾವಕ್ಕೆ ಪ್ರಾಧಾನ್ಯತೆಯನ್ನು ನೀಡಿ, ಭಕ್ತಿರಸವನ್ನು ಉಜ್ವಲ ರಸವೆಂದು ಲೌಕಿಕ ಶೃಂಗಾರಕ್ಕೆ ಪ್ರಾಮುಖ್ಯತೆಯನ್ನು ನೀಡಲಾಯಿತು.

ಮಾಧುರ್ಯ ಭಾವಪ್ರಧಾನವಾದ ರಾಗಾನುಭಾವಭಕ್ತಿಯ ವಿಕಾಸದಲ್ಲಿ ರಾಧಾವಲ್ಲಭೀ ಸಂಪ್ರದಾಯಕ್ಕೆ ವಿಶಿಷ್ಟವಾದ ಸ್ಥಾನವಿದೆ. ಈ ಸಂಪ್ರದಾಯದ ಪ್ರವರ್ತಕ ಶ್ರೀ ಹಿತಹರಿವಂಶರು ಕೃಷ್ಣನಿಗೆ ಬದಲಾಗಿ ರಾಧಾಳ ಭಕ್ತಿಗೆ ಪ್ರಾಮುಖ್ಯತೆಯನ್ನು ನೀಡಿದರು. ಎಲ್ಲಿಯತನಕ ನಮ್ಮ ಬುದ್ಧಿ ವಿಧಿ-ನಿಷೇಧಪೂರಕವಾಗಿರುತ್ತದೋ ಅಲ್ಲಿಯ ತನಕ ಲೌಕಿಕ ಕಾಮನೆಗಳಿಂದ ಮೇಲೇರಲು ಸಾಧ್ಯವಿಲ್ಲ ಎಂಬುದು ಈ ಮತದ ಅಭಿಪ್ರಾಯವಾಗಿತ್ತು. ದೂಷಿತ ಮಾನಸಿಕ ವೃತ್ತಿಗಳ ಪರಿಷ್ಕಾರವನ್ನು ಯೋಗ ಎಂದು ತಿಳಿದ ಶ್ರೀ ಹಿತಹರಿವಂಶರು 'ದಂಪತಿ ಕುಂಜ-ಕೇಲಿ'ಯ ಮಹತ್ವವನ್ನು ಸ್ಥಾಪಿಸಿದರು. ಇದನ್ನು ತಿಳಿಯಲು ಅನನ್ಯ ಭಕ್ತಿ ಅತ್ಯಾವಶ್ಯಕ ಎಂದರು. ರಾಧಾ-ವಲ್ಲಭೀ ಸಂಪ್ರದಾಯದ ಸಿದ್ಧಾಂತ ಪಕ್ಷವನ್ನು ಶ್ರೀ ಹಜಾರೀ ಪ್ರಸಾದ ದ್ವಿವೇದಿಯವರು ಈ ರೀತಿ ಉಲ್ಲೇಖ ಮಾಡಿದ್ದಾರೆ – "ನಿಗಮಾಗಮ ಅಗೋಚರ, ಸಚ್ಚಿದಾನಂದ, ಘನವಿಗ್ರಹ ಶ್ರೀ ರಾಧಾಕೃಷ್ಣ ನಿತ್ಯ ಕಿಶೋರ ಯುಗಳ ರೂಪದಿಂದ ವೃಂದಾವನದಲ್ಲಿ ಎಂತಹ ಪ್ರೇಮಕ್ರೀಡೆ ಮಾಡುತ್ತಾರೆಂದರೆ ಅವರು ಸ್ವಕೀಯ ಮತ್ತು ಪರಕೀಯ ಭಾವನೆಗಳ ಪ್ರಜ್ಞಾವಂತರು ಹಾಗೂ ಆ ಸಮಯದಲ್ಲಿ ಸ್ವೇಚ್ಛೆಯಿಂದ ಈ ಯುಗಳ ಬ್ರಜೇಂದ್ರ ಮತ್ತು ಶ್ರೀ ವೃಷಭಾನುನಂದಿನೀ ಎಂಬ ಹೆಸರಿನಿಂದ ಬ್ರಜದಲ್ಲಿ ಪ್ರಕಟರಾಗಿ ತನ್ನ ರಹಸ್ಯಲೀಲೆಯಿಂದ ತನ್ನ ರಸಿಕ ಜನರನ್ನು ಆನಂದಪ್ಲಾವಿತರನ್ನಾಗಿಸುತ್ತಾರೆ."

ಈ ರೀತಿಯಲ್ಲಿ ಭಕ್ತಿ ಭಾವನೆಯ ಆಧಾರದಿಂದ ಮುಂದುವರಿಯಿತು. ಅದರಲ್ಲಿ ರಾಗಾತ್ಮಕ ಪಕ್ಷದ ವಿಕಾಸ ನಂತರ ಆಯಿತು. ಇಲ್ಲಿ ಶಾಸ್ತ್ರೀಯ ಪಕ್ಷಕ್ಕೆ ಬದಲಾಗಿ ಭಾವಾತ್ಮಕತೆಗೆ ಪ್ರಾಧಾನ್ಯತೆ ದೊರೆಯಿತು. ಸಮಕಾಲೀನ ರಾಜಕೀಯ, ಸಾಮಾಜಿಕ ಹಾಗೂ ಸಾಂಪ್ರದಾಯಿಕ ಪರಿಸ್ಥಿತಿಗಳು

ರಾಗಾತ್ಮಕ ಪಕ್ಷವನ್ನು ದೃಢವಾಗಿಸಿದವು. ಶ್ರೀಕೃಷ್ಣನ ಆಹ್ಲಾದಿನೀ ಶಕ್ತಿ, ಆನಂದವಿಧಾಯಿನೀ ರಾಧಾರಾಣಿ ಮತ್ತು ಅಸಂಖ್ಯ ಗೋಪಿಕೆಯರ ಕ್ರೀಢೆಯಲ್ಲಿ ಲೀನವಾಗಿರುವ ಶ್ರೀ ಕೃಷ್ಣನ ಭಾವ ಜನಮಾನಸದಲ್ಲಿ ಸ್ಥಾಯಿಯಾಗಿ ನೆಲೆನಿಂತಿತು. ಪೂತನೀ ಮತ್ತು ಕಂಸನ ಮುಕ್ತಿದಾತ, ಸುದಾಮನ ಅಕ್ಕಿ ಹಾಗೂ ವಿದುರನ ಕಾಯಿಪಲ್ಯದಲ್ಲಿ ಮುಗ್ಧನಾಗುವ ಪ್ರೇಮ ಮತ್ತು ಆನಂದದಲ್ಲಿ ಗೋಪಿಕೆಯರ ಪ್ರಾಣವಲ್ಲಭ ಮತ್ತು ಯಶೋದೆಯ ಪ್ರೀತಿಯ ಶ್ರೀಕೃಷ್ಣ ಹೃದಯಾಂತರಾಳದಲ್ಲಿ ಯಾವತ್ತಿಗೂ ನೆಲೆನಿಲ್ಲುತ್ತಾನೆ. ಪ್ರತಿಯೊಬ್ಬ ಭಕ್ತನೂ ತನ್ನ ಭಾವಕ್ಕೆ ಅನುರೂಪನಾದ ಭಗವಂತಹ ರೂಪದ ಕಲ್ಪನೆಯನ್ನು ಮಡುತ್ತಾ ಹೋದರು. ಇದೇ ಪರಂಪರೆಯಲ್ಲಿ ಇಂತಹ ಒಂದು ಆತ್ಮದ ಜನ್ಮವಾಯಿತು. ಆಕೆಯೇ ಪ್ರೇಮಯೋಗಿನೀ ಮೀರಾ. ಆಕೆಯ ಮಾಧುರ್ಯಭಾವ ಅತ್ಯಂತ ಉತ್ಕೃಷ್ಟ ಶ್ರೇಣಿಯ ತನಕ ತಲುಪಿತು.

### ಆಕರಸೂಚಿ


೧. **ಡಾ. ಬಿ. ಎಸ್. ಸುಮಿತ್ರಾಬಾಯಿ, ೨೦೦೭**

ಅಕ್ಕಮಹಾದೇವಿ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು

೨. **ಡಾ. ಪಿ. ವಿ. ನಾರಾಯಣ, ೧೯೯೭**

ವಚನ ಸಾಹಿತ್ಯ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು

೩. **ಡಾ. ಕೃಷ್ಣದೇವ ಶರ್ಮ, ೧೯೭೩**

ಭಕ್ತಿಕಾಲೀನ ಕೃಷ್ಣಕಾವ್ಯ ಕಾ ಅಧ್ಯಯನ, ರೀಗಲ್ ಬುಕ್ ಡಿಪೋ, ಡೆಲ್ಲಿ – ೬

## ೪.೨ ಅಕ್ಕಮಹಾದೇವಿ ಮತ್ತು ಮೀರಾಬಾಯಿಯ ಸಾಹಿತ್ಯಗಳಲ್ಲಿ ಭಕ್ತಿಯ ಸ್ವರೂಪ – ತೌಲನಿಕ ವಿವೇಚನೆ

ಲಿಂಗ ಒಡನಾಟದಲ್ಲಿ ಮಗ್ನಳಾದ ಮಹಾದೇವಿ ಮತ್ತು ಗಿರಿಧರ ಗೋಪಾಲನಲ್ಲಿ ಲೀನಳಾದ ಮೀರಾಬಾಯಿ ಯುವಾವಸ್ಥೆಗೆ ಬಂದಾಗ ತಮ್ಮ ಅಸೀಮ ಸ್ನೇಹವನ್ನೂ ಅಪಾರ ಪ್ರೇಮವನ್ನೂ ಅದ್ಭುತ ಪ್ರತಿಭೆಯನ್ನೂ ತಮ್ಮ ಆರಾಧ್ಯ ದೇವರಲ್ಲಿ ಕೇಂದ್ರೀಕರಿಸಿದರು. ಲೌಕಿಕ ಜೀವನದಲ್ಲಿ, ಪತಿಯರಲ್ಲಿ ಅವರಿಗೆ ಆಸಕ್ತಿಯೇ ಇರಲಿಲ್ಲ.

"ಹರನೇ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೆ ನೋಡಾ" ಎಂದು ಅಕ್ಕ ಮಹಾದೇವಿ ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವಂಗೆ ಒಲಿದಿದ್ದಾಳೆ. ಕುಲಸೀಮೆಯಲ್ಲದ ನಿಸ್ಸೀಮ ಚೆಲುವಂಗೆ ಮಾರುಹೋಗಿದ್ದಾಳೆ. ಚೆನ್ನಮಲ್ಲಿಕಾರ್ಜುನನೇ ಆಕೆಗೆ ಗಂಡ. "ಈ ಸಾವ, ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕಾ" ಎಂದು ಅಕ್ಕಮಹಾದೇವಿ ಲೌಕಿಕ ಪತಿಯರ ಬಗ್ಗೆ ನಿರಾಸಕ್ತಿಯನ್ನು ತೋರಿ ವೈರಾಗ್ಯದ ಹಾದಿಯನ್ನು ತುಳಿದಳು. ಪ್ರಾಪಂಚಿಕ ಅಲಂಕಾರ, ವೇಷ-ಭೂಷಣಗಳನ್ನು ತೊರೆದು ದಿಗಂಬರೆಯಾದಳು. ಅದೇ ರೀತಿ ಮೀರಾಳಿಗೆ ಕೃಷ್ಣನೇ ಸಂಗಾತಿ. ಆಕೆಯ ಪ್ರೇಮ ಅತ್ಯಂತ ವಿಲಕ್ಷಣವೂ ಗಾಢವೂ ಆದುದು. ಆಕೆಯೇ ಹೇಳುವಂತೆ –

> ಪೂರ್ವ ಜನುಮಕೀ ಪ್ರೀತಿ ಹಮಾರೀ,
> ಅಬ್ ನಹೀಂ ಜಾತ ನಿಬಾರಿ

ಅದಕ್ಕಾಗಿ ಆಕೆ,

> ಐಸೇ ವರಕೋ ಕ್ಯಾಕರೂಂ ಜೋ ಜನಮೆ
> ಔರ್ ಮರ್ ಜಾಯೆ ।
> ವರ ವರಿಯೆ ಏಕ ಸಾವರಿಯಾರೀ ॥

"ಹುಟ್ಟಿ ಸಾಯುವ ವರನನ್ನು ನಾನೇನು ಮಾಡಲಿ? ಒಬ್ಬನೇ ಒಬ್ಬನಾದ ಕೃಷ್ಣನೆಂಬ ವರನನ್ನೇ ವರಿಸುವೆ" ಎಂದು ಹೇಳಿ ಲೌಕಿಕ ಪತಿಯ ಬಗ್ಗೆ ಅನಾಸಕ್ತಿಯನ್ನು ತೋರಿ ಗಿರಿಧರ ಗೋಪಾಲನ ಭಜನೆಯಲ್ಲಿ ಎಲ್ಲವನ್ನೂ ಮರೆತಿದ್ದಾಳೆ. ಹಗಲಿರುಳು ಸಾಧು ಸಂತರ ಸಹವಾಸದಲ್ಲಿ ಕಳೆಯತೊಡಗಿದಳು. ಗಿರಿಧರ ಗೋಪಾಲನ ಮೂರ್ತಿಯ ಮುಂದೆ ಗೆಜ್ಜೆ ಕಟ್ಟಿ ಕುಣಿಯತೊಡಗಿದಳು –

> ಪಗ ಘಂಘರೂ ಬಾಂಧಿ ಮೀರಾ ನಾಚೀರೇ॥

ಮೀರಾಬಾಯಿ ಮೇವಾಡದ ಪ್ರಸಿದ್ಧ ರಾಜಮನೆತನದ ಮಗಳು. ಇಂತಹ ಹೆಣ್ಣು ಮಗಳು ಕಂಡ ಕಂಡ ಸಾಧು ಸಂತರೊಡನೆ ತಿರುಗಾಡುವುದು ರಾಜಮನೆತನಕ್ಕೂ, ರಾಣಾನಿಗೂ ಸರಿಕಾಣಲಿಲ್ಲ. "ಸಾಸ ಕಹೀ ಕುಲ ನಾಶಿರೇ" ಎಂದು ಅತ್ತೆ ಆಕೆಯನ್ನು ಕುಲನಾಶಿಯೆಂದು ಕರೆದಳು. ರಾಣಾ ಹಾವಿನ ಪೆಟ್ಟಿಗೆಯನ್ನೂ ವಿಷದ ಬಟ್ಟಲನ್ನೂ ಕಳುಹಿಸಿ ಮೀರಾಬಾಯಿಯ ಹತ್ಯೆಗೆ ಯತ್ನಿಸುತ್ತಾನೆ. ಆದರೆ ಮೀರಾಬಾಯಿಯು ಅದರ ಬಗ್ಗೆ ಚಿಂತೆ ಮಾಡಲಿಲ್ಲ. ಆಕೆ ಧೈರ್ಯದಿಂದ –

ಮೇರೆ ತೋ ಗಿರಿಧರ ಗೋಪಾಲ ದೂಸರಾ ನ ಕೋಯೀ ।
ಜಾಕೆ ಸಿರ ಮೋರ ಮುಕುಟ ಮೇರೆ ಪತಿ ಸೋಯೀ ॥
ಚಾಂಡಿ ದಯೀ ಕುಲಕೀ ಕಾನಿ ಕಹಾಕರಿ ಹೈ ಕೋಯೀ ।
ಸಂತನ ಢಿಗ ಬೈಠಿ ಬೈಠಿ ಲೋಕ ಲಾಜ ಖೋಯೀ ॥

ನನ್ನ ಗಂಡ ಗಿರಿಧರ ಗೋಪಾಲ. ಬೇರಾರೂ ಅಲ್ಲ. ಯಾರ ತಲೆಯಲ್ಲಿ ನವಿಲಗರಿಯ ಕಿರೀಟವಿದೆಯೋ ಆತನೇ ನನ್ನ ಪತಿ. ಆತನಿಗಾಗಿ ನಾನು ಕುಲಮರ್ಯಾದೆ, ಸಮಾಜ ಮರ್ಯಾದೆ ಎಲ್ಲವನ್ನೂ ತೊರೆದಿದ್ದೇನೆ, ಸಾಧುಗಳೊಡನೆ ಕುಳಿತು ಲೋಕಲಜ್ಜೆಯನ್ನು ತೊರೆದಿದ್ದೇನೆ.

ಜನರು ಮೀರಾಬಾಯಿಯನ್ನು ಹುಚ್ಚಿಯೆಂದರು –

ಕೊಯೀ ಕಹಿ ಮೀರಾಬಾಯಿ ಬಾವರೀ ।
ಕೋಯೀ ಕಹಿ ಮಹಮಾತೀರೇ ॥

ಮೀರಾಬಾಯಿ ಜನರ ಈ ಅವಹೇಳನಕ್ಕೆ ಅಂಜಲಿಲ್ಲ. ತನ್ನ ಹಾದಿಯಿಂದ ಹಿಂಜರಿಯಲಿಲ್ಲ. ಗಿರಿಧರ ಗೋಪಾಲನ ಗುಣಗಾನ ಮಾಡುತ್ತಾ ಅದರಲ್ಲಿಯೇ ಮಗ್ನಳಾಗಿದ್ದಾಳೆ.

ಕೋಯೀ ನಿಂದೋ, ಕೋಯೀ ಬಿಂದೋ ಗುಣ ಗೋವಿಂದಕಾ ಗಾಸ್ಯಾ ।
ಜಿನೂ ಮಾರಗ ಮ್ಹಾರಾ ಸಾಧು ಪಧಾರೇ ಉನ ಮಾರಗ ರಹೆ ಜಾಸ್ಯಾ ॥

ಎಂದು ಸಾಧುಗಳು ನಡೆದ ಹಾದಿಯಲ್ಲಿ ಮುನ್ನಡೆದಿದ್ದಾಳೆ.

ದಿಗಂಬರೆಯಾಗಿ ಅಂದಿನ ಸಮಾಜವನ್ನು ಧಿಕ್ಕರಿಸಿದ ಅಕ್ಕಮಹಾದೇವಿಯದೂ ಸಹ ಮೀರಾಳದೇ ಪರಿಸ್ಥಿತಿ. ಪುರುಷ ಸಮಾಜವನ್ನೇ ತಿರಸ್ಕರಿಸಿದ ಈಕೆ ಯುಗಯುಗಗಳಿಂದ ಬಂದ ಪುರುಷನ ಪೌರುಷವನ್ನು ಕೆಣಕಿದ್ದಾಳೆ. ಆದರೆ ಅಕ್ಕನ ಪ್ರಚಂಡ ವೈರಾಗ್ಯದ ಮುಂದೆ ಯುಗ ಹಿಂದೆ ಸರಿದಿದೆ. ಪೌರುಷ ತಲೆ ತಗ್ಗಿಸಿದೆ. ಜನ ಆಕೆಯನ್ನು ಹೀಯಾಳಿಸಿರಬಹುದು, ನಿಂದಿಸಿರಬಹುದು.

ಆದರೆ ಆಕೆಗೆ ಚೆನ್ನಮಲ್ಲಿಕಾರ್ಜುನನೊಬ್ಬನದೇ ಧ್ಯಾನ. ಆತನೇ ಅವಳ ಪತಿ. ಆತನಿಗಾಗಿಯೇ ಆಕೆಯ ತಪ. ಈ ಯಾವ ಟೀಕೆಟಪ್ಪಣಿಗಳಿಗೆ ಕಿವಿಗೊಡದೆ ಆಕೆ ಈ ರೀತಿ ಸಮಾಧಾನ ಹೇಳಿಕೊಂಡಿದ್ದಾಳೆ –

ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತವ್ವಾ !
ಸಮುದ್ರದ ತಡಿಯಲ್ಲಿ ಮನೆಯ ಮಾಡಿ ನೆರೆತೊರೆಗಳಿಗಂಜಿದಡೆಂತವ್ವಾ !

ಅಕ್ಕಮಹಾದೇವಿ ಜಗತ್ತಿಗೆ ಮರುಳಾಗಿ ಕಂಡರೆ ಜಗತ್ತು ಆಕೆಗೆ ಮರುಳಾಗಿ ಕಾಣುತ್ತದೆ. ಅದಕ್ಕಾಗಿ ಆಕೆ ಈ ಕೆಳಗಿನಂತೆ ಮಾರ್ಮಿಕವಾಗಿ ಹೇಳಿದ್ದಾಳೆ.

ಲೋಕವೆಂಬ ಮಾಯೆಗೆ ಶರಣ ಚಾರಿತ್ರ ಮರುಳಾಗಿ ತೋರುವದು.

ಆದರೆ ಜನರ ಅಜ್ಞಾನವನ್ನು ನೋಡಿ ಅಕ್ಕಮಹಾದೇವಿ ಮತ್ತು ಮೀರಾಬಾಯಿ ಇಬ್ಬರೂ ಕಣ್ಣೀರು ಸುರಿಸಿದ್ದಾರೆ. ನಮ್ಮ ನೋವನ್ನು ಜನತೆ ಅರ್ಥಮಾಡಿಕೊಳ್ಳಲಿಲ್ಲ. ನಮ್ಮ ನೋವು ಅವರಿಗೆ ತಿಳಿಯಬಹುದೇ? ಎಂದು ಇಬ್ಬರೂ ಚಡಪಡಿಸಿದ್ದಾರೆ.

ಅಕ್ಕಮಹಾದೇವಿ ದುಃಖದಿಂದ

ಬಂಜೆ ಬೇನೆಯನರಿಯಳು, ಮಲತಾಯಿ ಮುದ್ದ ಬಲ್ಲಳೇ?
ನೊಂದ ನೋವ ನೋಯದವರೆತ್ತ ಬಲ್ಲರು?

ಎಂದರೆ, ಇದೇ ಮಾತನ್ನೇ ಮೀರಾ ಈ ರೀತಿ ಹೇಳಿದ್ದಾಳೆ –

ಮೇರಾ ದರದ ಕೊಯಿ ನ ಜಾನೆ,
ಘಾಯಲಕೀ ಗತಿ ಘಾಯಲ ಜಾನ್ಯೆ ॥

ನನ್ನ ನೋವನ್ನು ಯಾರೂ ಅರಿಯರು. ಯಾಕೆಂದರೆ ನೋವಿನ ತೀವ್ರತೆಯನ್ನು ಇನ್ನೊಬ್ಬ ನೊಂದವನು ಮಾತ್ರ ಅರಿತಿರುತ್ತಾನೆ.

ಇಷ್ಟೆಲ್ಲ ಆದರೂ ಸಮಾಜ ಅವರಿಬ್ಬರನ್ನು ಕಾಡಿದೆ. ಪ್ರಭುತ್ವ ಅವರನ್ನು ಕೊಲ್ಲಿಸಲೂ ಯತ್ನಿಸಿರಬಹುದು. ರಾಜನಿಗೆ ಹೆದರಿ ಪ್ರಜೆಗಳು ಅವರಿಗೆ ಆಶ್ರಯ ನೀಡದಿರಬಹುದು. ಆಹಾರ ಕೊಡದಿರಬಹುದು. ಆದರೆ ಇವಕ್ಕೆಲ್ಲ ಅಂಜುವ ಸ್ತ್ರೀಯರು ಇವರಲ್ಲ. ಅಕ್ಕಮಹಾದೇವಿ ತನಗೆ ಒದಗಬಹುದಾದ ಗಂಡಾಂತರವನ್ನು ಅರಿತು ಧೈರ್ಯದಿಂದ ಈ ರೀತಿ ಹೇಳಿ ಹೊರಟರೆ –

ಮುಗಿಲು ಹರಿದು ಬಿದ್ದರೆ ಎನಗೆ ಮಜ್ಜನಕೆರೆದರೆಂಬೆನು
ಗಿರಿ ಬಿದ್ದರೆ ಪುಷ್ಪ ಚೆಲ್ಲಿದರೆಂಬೆನು
ಸಿರ ಹರಿದು ಬಿದ್ದರೆ ಪ್ರಾಣನಿಮಗರ್ಪಿತವೆಂಬೆನು.

ಮೀರಾಬಾಯಿ ಸಹ ಅದೇ ಧೀರ ಹೆಜ್ಜೆಯಲ್ಲಿ ನಡೆದಿದ್ದಾಳೆ.

ಸೀಸೋದ್ಯಾ ರೂಠೆ ತೋ ಮ್ಯಾರೋ ಕಾಯಿ ಕರಲೇಸಿ,
ಮೈತೋ ಗುಣ ಗೋವಿಂದ ಕಾ ಗಾಂಸೂ ಹೋ ಮಾಯಿ ॥

ರಾಣಾ ವಿಷವನ್ನು ಕಳಿಸಿದಾಗ ಮೀರಾ ಅದನ್ನು ಕುಡಿದಿದ್ದಾಳೆ. ವಿಷ ಆಕೆಗೆ ಅಮೃತವಾಗಿದೆ.

ವಿಷಕಾ ಪ್ಯಾಲ ರಾಣಾ ಬೇಜ್ಯಾ,
ಮೀರಾ ಪೀವತ್ ಅಮೃತ್ ಭಯೀರೆ

ಅಕ್ಕಮಹಾದೇವಿ ವಿಷ ಕುಡಿಯಲಿಲ್ಲ. ಆದರೆ ವಿಷಕೊಡುವ ಸಮಾಜಕ್ಕೇ ಆಹ್ವಾನವಿತ್ತಿದ್ದಾಳೆ. –

ಹಸಿವಾದೊಡೆ ಭಿಕ್ಷಾನ್ನಗಳುಂಟು,
ತೃಷೆಯಾದೊಡೆ ಕೆರೆಹಳ್ಳ ಬಾವಿಗಳುಂಟು
ಶಯನಕ್ಕೆ ಹಾಳು ದೇಗುಲಗಳುಂಟು
ಚೆನ್ನಮಲ್ಲಿಕಾರ್ಜುನ, ಆತ್ಮಸಂಗಾತಕ್ಕೆ ನೀನೆನಗುಂಟು.

ಹೀಗೆ ತಮಗೊದಗಿದ ಅನೇಕ ತೊಂದರೆಗಳಿಂದ ಅವರು ಹಿಂಜರಿಯದೆ ಮುನ್ನಡೆದಿದ್ದಾರೆ. ಕಷ್ಟಗಳು ಅವರನ್ನು ನಿರುತ್ಸಾಹಗೊಳಿಸದೆ ಮತ್ತಷ್ಟು ಉತ್ಸಾಹವನ್ನು ತುಂಬಿವೆ. ಆ ಭಗವಂತನೇ ಸಂಗಾತಿಯಾಗಿರುವಾಗ ಅವರು ಯಾರಿಗೆ ಹೆದರಬೇಕು? ಅದಕ್ಕಾಗಿ ಮಹಾದೇವಿ –

ಆರೂ ಇಲ್ಲದವಳೆಂದು ಅಳಲುಗೊಡಬೇಡ ಕಂಡಯ್ಯ,
ಏನು ಮಾಡಿದಡೆಯೂ ಆನಂಜುವವಳಲ್ಲ

ಎಂದು ಹೇಳಿದರೆ ಮೀರಾಬಾಯಿ ಈ ರೀತಿ ಹೇಳಿದ್ದಾಳೆ.

ಲೋಕ ಲಾಜಕೀ ಕಾಣ ನ ಮಾನೂಂ
ನಿರಭೈ ನಿಸಾನ ಘುಸ್ಯಾ ಹೋ ಮಾಯಿ
ಮೀರಾ ಸರಣ ಸಬಲ ಗಿರಿಧಾರಕೀ

ಮೀರಾಬಾಯಿ ಶಕ್ತಿಶಾಲಿಯಾದ ಗಿರಿಧರ ಗೋಪಾಲನ ಶರಣು ಹೋಗಿದ್ದಾಳೆ. ನಿರ್ಭಯ ಅವಳ ಹೃದಯವನ್ನು ವ್ಯಾಪಿಸಿದೆ.

ಹೀಗೆ ಅವರಿಬ್ಬರೂ ನಿರ್ಭಯಚಿತ್ತರಾಗಿ ಸಮಾಜದ ಎಡರು ತೊಡರುಗಳಿಗಂಜದೆ ತಮ್ಮ ಅಲೌಕಿಕ ಪತಿಯರನ್ನು ಹುಡುಕುತ್ತ ಹೊರಟದ್ದಾರೆ. ಮೀರಾಬಾಯಿ ಗಿರಿಧರ ಗೋಪಾಲನನ್ನು ಹುಡುಕುತ್ತ ವೃಂದಾವನಕ್ಕೆ ಬಂದರೆ, ಅಕ್ಕಮಹಾದೇವಿ ಚೆನ್ನಮಲ್ಲಿಕಾರ್ಜುನನನ್ನು ಅರಸುತ್ತ ಕಲ್ಯಾಣಕ್ಕೆ ಬಂದಿದ್ದಾಳೆ.

ಕಲ್ಯಾಣ ಬಸವಣ್ಣನವರ ಕರ್ಮಭೂಮಿಯಾದರೆ ವೃಂದಾವನ ಶ್ರೀಕೃಷ್ಣನ ಲೀಲಾಭೂಮಿ. ಕಲ್ಯಾಣ ಬಸವಣ್ಣನವರ ಭೂಕೈಲಾಸ. ಶರಣರ ಪಾದಧೂಳಿಯಿಂದ ಪುನೀತವಾದ ಭೂಮಿ ಕಲ್ಯಾಣ. ಸಾಧು ಸಂತರ ಕೀರ್ತನೆ ಭಜನೆಗಳಿಂದ ಮಂಗಲಮಯವಾದ ಭೂಮಿ ವೃಂದಾವನ. ವೃಂದಾವನದಲ್ಲಿ ಸಾಧು ಗೋಷ್ಠಿಯಾದರೆ ಕಲ್ಯಾಣದಲ್ಲಿ ಅನುಭವ ಮಂಟಪ. ವೃಂದಾವನದಲ್ಲಿ ರಾಸಲೀಲೆ, ಕಲ್ಯಾಣದಲ್ಲಿ ಶೂನ್ಯಸಂಪಾದನೆ. ವೃಂದಾವನದ ಮೂಲೆಮೂಲೆಗಳಲ್ಲಿ ಮುರಲಿಯ ಮಧುರ ಧ್ವನಿ ಕೇಳಿಬಂದರೆ, ಕಲ್ಯಾಣದಲ್ಲಿ ಶರಣರ ವೈಚಾರಿಕ ಅಭಿವ್ಯಕ್ತಿ–ವಚನಗಳ ಮೊಳಗು ಕೇಳಿಸಿತು.

ಕಲ್ಯಾಣ ಹಾಗೂ ವೃಂದಾವನ ಅಕ್ಕಮಹಾದೇವಿ ಮತ್ತು ಮೀರಾಬಾಯಿಯ ಜೀವನದ ಮೇಲೆ ಸಾಕಷ್ಟು ಪ್ರಭಾವ ಬೀರಿವೆ. ಇಲ್ಲಿ ಬಂದು ಅವರು ತಮ್ಮ ತಮ್ಮ ಮನಸ್ಸಿನ ದುಗುಡವನ್ನು ಕಳೆದುಕೊಂಡಿದ್ದಾರೆ. ತಮ್ಮ ತಪ್ಪುಗಳನ್ನು ತಿದ್ದಿಕೊಂಡಿದ್ದಾರೆ. ಈಗ ಅವರಿಗೆ ಒಂದೇ ಒಂದು ಚಿಂತೆ. ತಮ್ಮ ಆರಾಧ್ಯ ದೇವನನ್ನು ಕಾಣಬೇಕು, ಅವನಿಗೆ ಸರ್ವಸ್ವವನ್ನು ಸಮರ್ಪಿಸಬೇಕು.

ತಮ್ಮ ತಮ್ಮ ಆರಾಧ್ಯ ದೇವನನ್ನು ಅವರ ಅನೇಕ ರೂಪಗಳಲ್ಲಿ ಕಂಡಿದ್ದಾರೆ. ಅವನು ನಿರಾಕಾರನೂ ಹೌದು, ಸಾಕಾರನೂ ಹೌದು. ಎರಡೂ ರೂಪಗಳನ್ನೂ ಅವರು ಪ್ರೀತಿಸಿದ್ದಾರೆ. ಆತನ ದರ್ಶನ ಪಡೆಯಲು ಹಂಬಲಿಸಿದ್ದಾರೆ.

ದೇವರು ಸರ್ವಾಂತರ್ಯಾಮಿ. ಜಡ–ಚೇತನ ವಸ್ತುಗಳಲ್ಲಿ ಅವರು ತಮ್ಮ ಪ್ರಿಯತಮನ ದರ್ಶನ ಪಡೆಯಲು ಚಡಪಡಿಸಿದ್ದಾರೆ. ಅಕ್ಕಮಹಾದೇವಿಯ ಹಂಬಲ ಈ ರೀತಿಯದು. –

> ವನವೆಲ್ಲ ನೀವೆ, ವನದೊಳಗಣ ದೇವತರುವೆಲ್ಲ ನೀವೆ
> ಚೆನ್ನಮಲ್ಲಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರ.

ಇದೇ ರೀತಿ ಮೀರಾಬಾಯಿಯೂ ಸಹ ಸಕಲ ಚರಾಚರ ಸೃಷ್ಟಿಯಲ್ಲಿ ಶ್ರೀಕೃಷ್ಣನನ್ನು ಕಾಣಲು ಹಂಬಲಿಸಿದ್ದಾಳೆ. ಪರಮಾತ್ಮನು ನಿರಂಜನ, ನಿರಾಕಾರ, ಅವನನು ಅರಿಯುವುದು ಅಸಾಧ್ಯ. ಅವನು ಅವಿನಾಶಿ, ಅಮರ. ಮೀರಾಬಾಯಿ ಆ ಪರಮಾತ್ಮನ ಅವಿನಾಶಿ ಸ್ವರೂಪವನ್ನು ಈ ರೀತಿ ಬಣ್ಣಿಸಿದ್ದಾಳೆ –

ಚಾಂದ್ ಜಾಯಗಾ, ಸೂರಜ್ ಜಾಯಗಾ, ಜಾಯಗಾ ಧರಣ ಆಕಾಶೀ,
ಪವನ ಪಾನೀ ದೋನೋಂ ಹೀ ಜಾಯಂಗೇ ಅಟಲ ರಹೆ ಅವಿನಾಶೀ

ಸೂರ್ಯ, ಚಂದ್ರ, ಆಕಾಶ, ಭೂಮಿ, ನೀರು, ಗಾಳಿ ಎಲ್ಲವೂ ನಶ್ವರ. ಆದರೆ ಭಗವಂತನೊಬ್ಬನೇ ಶಾಶ್ವತ. ಅದಕ್ಕಾಗಿಯೇ ಅಕ್ಕಮಹಾದೇವಿ ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವಂಗೆ ಒಲಿದಿದ್ದಾಳೆ.

ಅಕ್ಕಮಹಾದೇವಿ ಮತ್ತು ಮೀರಾಬಾಯಿಯ ಆರಾಧ್ಯದೇವರ ಇನ್ನೊಂದು ರೂಪ ಯೋಗೀಶ್ವರ. ಮೀರಾಬಾಯಿ ಹೇಳುವಂತೆ –

ಗಗನ ಮಂಡಲಮೆ, ಸ ಏಜ ಪಿಯಾಕೀ, ಕಿಸ್ ವಿಧಿ ಮಿಲನಾ ಹೋಯಿ,
ತ್ರಿಕುಟೀ ಮಹಲಮೆ ಬನಾ ಹೈ ಝುರೋ ಖಾ ತಹಾಂಸೆ
ಝೂಂಕೀ ಲಗಾವೂಂಗೀ.

ಆತ ಶೂನ್ಯ ಮಹಲಿನಲ್ಲಿರುವಾತ. ಆತನನ್ನು ಕಾಣಲು ಸಮಾಧಿ ಸ್ಥಿತಿಯನ್ನು ಹೊಂದಬೇಕು. ಯೋಗಸಾಧನೆ ಮಾಡಬೇಕು.

ಅಕ್ಕಮಹಾದೇವಿಯೂ ಸಹ ಯೋಗೀಶ್ವರನ ರೂಪವನ್ನು ಬಹಳ ಚೆನ್ನಾಗಿ ಬಣ್ಣಿಸಿದ್ದಾಳೆ –

ಅಷ್ಟದಳ ಕಮಲದಾ ಬಟ್ಟ ಬಯಲೊಳೊಂದು
ಮುಟ್ಟಬಾರದಾ ಘನವಿಹುದು, ಮನದೊಳಗೆ
ದೃಷ್ಟಿಯಿತ್ತವನೆ ನಿಜಮುಕ್ತ

ಅವರ ಈ ಪರಮಾತ್ಮ ಅಗಮ್ಯ, ಅಗೋಚರ, ಅಕ್ಕಮಹಾದೇವಿ ಆ ಪರಮಾತ್ಮನ ನಿಜವನ್ನು ಈ ರೀತಿ ವಿವರಿಸಿದ್ದಾಳೆ.

ಅರಿಯನೆಂದರೆ ಅರಿಯಬಾರದು ನೋಡು,
ಘನಕ್ಕೆ ತಾನೇ ಘನ

ಮೀರಾಭಾಯಿ ಈ ರೀತಿಯಲ್ಲಿ ವರ್ಣಿಸಿದ್ದಾಳೆ.

ತೇರೇ ಮರಮ ನಹೀಂ ಪಾಯೋ ರೇ, ಹರಿ

ಹೇ ಹರಿ, ನಿನ್ನ ಮರ್ಮವನ್ನು ಅರಿಯಲು ಸಾಧ್ಯವಿಲ್ಲ.

ಆದರೆ ಇಂತಹ ಪರಮಾತ್ಮನ ದರ್ಶನವಾಗಬೇಕಾದರೆ ಭಾಗ್ಯಬೇಕು. ಆತನ ಕೃಪೆ ಬೇಕು ಎಂಬುದು ಅವರ ನಂಬಿಕೆ. ಅದಕ್ಕಾಗಿ ಮೀರಾಬಾಯಿ –

ಮೀರಾ ಕೇ ಪ್ರಭು ಅವಿನಾಶೀ
ಭಾಗ ಲೊಖ್ಯೋ ಸೋ ಹೀ ಪಾಯೋ

ಹರಿಯ ದರ್ಶನವಾಗಬೇಕಾದರೆ ಭಾಗ್ಯದ ಬಲ ಬೇಕು ಎಂದು ಹೇಳಿದರೆ ಅಕ್ಕಮಹಾದೇವಿಯೂ ಸಹ –

ಅರಸಿ ತೊಳಲಿದರಿಲ್ಲ ಬಯಸಿ ಹೊಕ್ಕರಿಲ್ಲ,
ತಪಸ್ಸು ಮಾಡಿದರಿಲ್ಲ ಅದು ತನ್ನ ಬಹುಕಾಲಕ್ಕಲ್ಲದೆ ಸಾಧ್ಯವಾಗದು
ಶಿವನೊಲಿದರಲ್ಲದೆ ಕೈಗೂಡದು.

ಎಂದಿದ್ದಾಳೆ.

ಭಗವಂತನು ದೂರದಲ್ಲಿಲ್ಲ. ಅವನು ಅವರ ಹೃದಯದಲ್ಲಿಯೇ ಇದ್ದಾನೆ. ಮೀರಾಬಾಯಿಯ ಪ್ರಿಯತಮನಾದ ಶ್ರೀಕೃಷ್ಣ ಆಕೆಯ ಹೃದಯದಲ್ಲಿಯೇ ವಾಸವಾಗಿದ್ದಾನೆ. ಆತನೆಲ್ಲಿಯೂ ಹೋಗಲಾರ. ಯಾರ ಪರಿ ಪರದೇಶದಲ್ಲಿರುವನೋ ಅವರು ಪತ್ರ ಬರೆಯುವುದುಂಟು. ಆದರೆ ಮೀರಾ ಪತ್ರ ಬರೆಯುವುದು ಹೇಗೆ? ಅವಳ ಪತಿ ಅವಳ ಹೃದಯದಲ್ಲಿಯೇ ಇದ್ದಾನೆ –

ಜಿನಕಾ ಪ್ರಿ ಪರದೇಶ ಬಸತ ಹೈ
ಲಿಖ ಲಿಖ ಭೇಜೇ ಪಾತೀ
ಮೇರೋ ಪಿಯ ಮೇರೇ ಹಿಯ ಬಸತ್ ಹೈ
ನ ಕಹೂಂ, ಆತೀ ಜಾತೀ ಹೈ

ಅಕ್ಕಮಹಾದೇವಿಯೂ ಸಹ ತನ್ನ ಆರಾಧ್ಯ ದೇವನನ್ನು ತನ್ನಲ್ಲಿಯೇ ಕಂಡುಕೊಂಡಿದ್ದಾಳೆ. ಆತನಿಗೆ ಪತ್ರ ಬರೆಯಬೇಕಾಗಿಲ್ಲ. ಅಲ್ಲಿ ಇಲ್ಲಿ ಹುಡುಕಬೇಕಾಗಿಲ್ಲ.

ಅಯ್ಯಾ ದೂರದಲ್ಲಿರ್ದಿಹೆ ಎಂದು ಬಾಯಾರಿ
ಬಳಲುತ್ತಿದ್ದೆನಯ್ಯ – ನಿಮ್ಮನೆಲ್ಲ ಕರಸ್ಥಲ
ದಲಿ ನೋಡಿ ನೋಡಿ ಕಂಗಳೇ ಪ್ರಾಣವಾಗಿರ್ದೆನಯ್ಯ

ಈ ನಿರ್ಗುಣಹೃದಯಸ್ವರೂಪಿಯು ಅವರಿಗೆ ಸಗುಣ ಸ್ವರೂಪಿಯೂ ಆಗಿದ್ದಾನೆ. ಅವನ ಸ್ವರೂಪವನ್ನು ಅವರು ಮನಸಾರೆ ಹೊಗಳಿದ್ದಾರೆ. ಆ ರೂಪವನ್ನು ಎಷ್ಟು ಹೊಗಳಿದರೂ ಅವರಿಗೆ ಸಾಲದು.

ಹೊಳೆವ ಕೆಂಜೆಡೆಗಳ ಮಣಿ, ಮಣಿ ಮುಕುಟ ಒಪ್ಪುವ
ಸುಲಿಪಲ್ಲ, ನಗೆಮೊಗದ ಕಂಗಳ ಕಾಂತಿಯಿಂ ಈರೇಳು
ಭುವನಮಂ ಬೆಳಗುವ ದಿವ್ಯ ಸ್ವರೂಪವ ಕಂಡೆ ನಾನು
ಕಂಡೆನ್ನ ಕಂಗಳ ಬರ ಹಿಂತತ್ತಿಂದು.

ಈ ರೀತಿ ಆ ಸುಂದರ ರೂಪವನ್ನು ಅಕ್ಕಮಹಾದೇವಿ ವರ್ಣಿಸಿದರೆ ಮೀರಾಬಾಯಿ –

ಬಸೋ ಮೇರೆ ನೈನ ಮೆ ನಂದಲಾಲ
ಮೋಹನಿ ಮೂರತಿ, ಸಾಂವಲಿ ಸೂರತಿ, ನೈನ ಬನೆ ಬಿಸಾಲ,
ಅಧರ ಸುಧಾರಸ ಮುರಲೀ ರಾಜತ, ಉರ ಬೈಜಯಂತೀ ಮಾಲ
ಕ್ಷುದ್ರ ಘಂಟಿಕಾ ಕಟಿತಟ ಶೋಭಿತ ನೂಪುರ ಸಬದ ರಸಾಲ
ಮೀರಾಕೆ ಪ್ರಭು ಸಂತನ ಸುಖದಾಯಿ, ಭಗತ ವಛಲ ಗೋಪಾಲ

ನಂದಲಾಲ ನನ್ನ ಕಣ್ಣಿನಲ್ಲೇ ವಾಸಿಸು. ನಿನ್ನ ಮೂರ್ತಿ ಮೋಹನ, ಶ್ಯಾಮಲ ಶರೀರದ ನಿನ್ನ ಕಣ್ಣುಗಳು ವಿಶಾಲವಾಗಿದೆ. ಅಮೃತ ರಸದಿಂದ ಕೂಡಿದ ನಿನ್ನ ತುಟಿಗಳಲ್ಲಿ ಮುರಲಿ ಶೋಭಿಸುತ್ತದೆ. ಹೃದಯದಲ್ಲಿ ವೈಜಯಂತೀ ಮಾಲೆಯಿದೆ. ಸೊಂಟದಲ್ಲಿ ಸಣ್ಣ ಗಂಟೆ ಶೋಭಿಸುತ್ತದೆ. ಗೆಜ್ಜೆಯ ಶಬ್ದ ಮಧುರವಾಗಿದೆ. ಮೀರಾಳ ಪ್ರಭು ಭಕ್ತವತ್ಸಲ ಗೋಪಾಲ ಸಂತರಿಗೆ ಸುಖ ನೀಡುವವನಾಗಿದ್ದಾನೆ – ಎಂದು ಮೀರಾಬಾಯಿ ಶ್ರೀಕೃಷ್ಣನ ಸುಂದರ ರೂಪವನ್ನು ಮನಸಾರೆ ಕೊಂಡಾಡಿದ್ದಾಳೆ.

ಈ ಅನಂತ ರೂಪನಾದ ಪರಮಾತ್ಮನನ್ನು ಕಾಣಲು ಅವರು ಬಗೆಬಗೆಯಾಗಿ ಕೊರಗಿದ್ದಾರೆ, ಮರುಗಿದ್ದಾರೆ. ಅವರ ಈ ಕೊರಗು, ಮರುಗು, ಹಂಬಲ, ವೇದನೆ ಎಲ್ಲರ ಹೃದಯವನ್ನೂ ಕರಗಿಸುತ್ತದೆ. ಇವರು ತಮ್ಮ ಆರಾಧ್ಯ ದೇವರ ದರ್ಶನ ಪಡೆಯಲು ಕಾತುರರಾಗಿದ್ದಾರೆ. ಅವರ

ವಿರಹದಲ್ಲಿ ವೇದನೆ ಇದೆ, ಪಾವಿತ್ರ್ಯವಿದೆ, ವ್ಯಾಕುಲತೆ ಇದೆ, ಸರಳ ಸೌಂದರ್ಯವಿದೆ ಮತ್ತು ಉದಾತ್ತ ಗಾಂಭೀರ್ಯವೂ ಇದೆ. ಅಕ್ಕಮಹಾದೇವಿಯ ವಚನಗಳಲ್ಲಿ ಮತ್ತು ಮೀರಾಬಾಯಿಯ ಪದಗಳಲ್ಲಿ ಈ ವಿರಹದ ವರ್ಣನೆ ಬಹಳ ಚೆನ್ನಾಗಿದೆ.

ತಮ್ಮ ಆರಾಧ್ಯದೇವರನ್ನು ಕಾಣಬೇಕೆಂಬುದು ಅವರ ಮಹತ್ತರವಾದ ಹಂಬಲ. ಆದರೆ ಅವರ ಈ ಪ್ರಿಯತಮರನ್ನು ಕರೆತರುವವರಾರು? ಅವರು ತಮ್ಮ ಭಾವೀ ಪತಿಯನ್ನು ಸವತಃ ಆಹ್ವಾನಿಸಬೇಕು. ಅಕ್ಕಮಹಾದೇವಿಯ ಪ್ರಿಯತಮ ಚನ್ನಮಲ್ಲಿಕಾರ್ಜುನನಾಗಲೀ, ಮೀರಾಬಾಯಿಯ ಗಿರಿಧರ ಗೋಪಾಲನಾಗಲಿ ಕರೆದಾಗ ಬರುವವರಲ್ಲ. ಬಾಹ್ಯಶೃಂಗಾರವನ್ನು ಮೆಚ್ಚುವವರಲ್ಲ. ಮನಸ್ಸು ಹಾರಿ ಬಿಟ್ಟರೆ ಮರೆಯಾಗುವವರು. ಇಂತಹ ಪ್ರಿಯತಮರು ಇವರ ಮನಸ್ಸನ್ನು ಸೆಳೆದಿದ್ದಾರೆ. ಅಕ್ಕಮಹಾದೇವಿ ಈ ಕೆಳಗಿನಂತೆ ಹೇಳಿ ತನ್ನ ಕೊರಗನ್ನು ತೋಡಿಕೊಂಡಿದ್ದಾಳೆ –

ಎನ್ನ ಮನವ ಮಾರುಗೊಂಡನವ್ವ
ಎನ್ನ ತನುವ ಸೂರೆಗೊಂಡನವ್ವ

ಮಾಯೀ ಮೋಹೀ ಮೋಹನೆ ಮಹ ಹರ್ಯೋ
ಕಹಾಂ ಕರೂ, ಕಿತಜಾವೂಂ ಸಜನೀ, ಪ್ರಾಣ ಪುರುಷ ಸೂ ಬರ್ಯೋ

ಮೋಹನನು ನನ್ನ ಮನಸ್ಸಿನ ಹರಣ ಮಾಡಿದ್ದಾನೆ. ನಾನೇನು ಮಾಡಲಿ? ಎಲ್ಲಿ ಹೋಗಲಿ? ಎಂದು ಮೀರಾಬಾಯಿ ತನ್ನ ಸಖಿಯರನ್ನು ಕೇಳಿದ್ದಾಳೆ.

ಮನಸ್ಸನ್ನು ಸೂರೆಗೊಂಡ ತಮ್ಮ ಪರಮಾತ್ಮನನ್ನು ಅವರು ಒಂದು ಗಳಿಗೆ ಕೂಡ ಬಿಟ್ಟಿರಲಾರರು. ಅವರು ಈಗ ಬರಬಹುದು, ಈಗ ಬರಬಹುದು ಎಂದು ದಾರಿ ಕಾದು ಬೇಸತ್ತಿದ್ದಾರೆ. ಅವನೇ ಅವರ ಪ್ರಾಣ, ಸರ್ವಸ್ವ. ಅಕ್ಕಮಹಾದೇವಿ ಹೀಗೆ ಹೇಳಿದ್ದಾಳೆ –

ನಿನ್ನ ಬರವೆನ್ನಸುವಿನ ಬರವು ಬಾರಯ್ಯ
ಚೆನ್ನಮಲ್ಲಿಕಾರ್ಜುನ ಬಂದಾನೆಂದು ಬಟ್ಟೆಗಳ
ನೋಡಿ ಬಾಯಾರುತ್ತಿಹೆನು?

ಪಿಯಾ ಬಿನ ರಹೋ ನ ಜಾಯ ।
ನಿಸಿ ದಿನ ಜೋವೋಂ ಬಾಟ ಪಿಯಾಕೀ,
ಖಬರೇ ಮಿಲೋಗೆ ಆಯೀ ॥

ಪ್ರಿಯತಮನಿಲ್ಲದೆ ಬದುಕಲು ಸಾಧ್ಯವಿಲ್ಲ – ಎಂದು ಮೀರಾಬಾಯಿ ಹಗಲಿರುಳು ದಾರಿ ಕಾಯುತ್ತಾಳೆ.

ದಾರಿ ಕಾದು ಕಾದು ಬರದೇ ಇದ್ದಾಗ ಅವರು ನಿರಾಶರಾಗಲಿಲ್ಲ. ದೂರದಲ್ಲಿ ಬರುತ್ತಿರಬಹುದೆಂದು ಅವರ ಕಲ್ಪನೆ. ಮೀರಾಬಾಯಿ–

ಮಹಲ ಚಢ ಚಢ ಜೋವಾಂ ಸಜನೀ ಕಬ ಆವಾ

ಮಹಡಿಯನ್ನೇರಿ ನೋಡಿದೆ, ಅವನ ಸುಳಿವಿಲ್ಲ. ಯಾವಾಗ ಬರಬಹುದು? ಎಂದು ಗೆಳತಿಯರಿಗೆ ಕೇಳಿದ್ದಾಳೆ. ಅಕ್ಕಮಹಾದೇವಿ ಅವರ ಸುಳಿವಿಲ್ಲದಾಗ ಕೊರಗಿ ಕೊರಗಿ ಸುಸ್ತಾಗುತ್ತಾಳೆ. ಆಕೆ ಹೀಗೆ ಹೇಳುತ್ತಾಳೆ :

ಬಂದಿಹನೆಂದು ಬಟ್ಟೆಯ ನೋಡಿ, ಬಾರದಿದ್ದಡೆ
ಕರಗಿ ಕೊರಗಿದೆನವ್ವಾ ತಡವಾದಡೆ ಬಡವಾದೆ ತಾಯಿ
ಚೆನ್ನಮಲ್ಲಿಕಾರ್ಜುನನ ಒಂದಿರುಳಗಲಿದೊಡೆ
ರೆಕ್ಕೆ ಸಡಿಲಿದ ಜಕ್ಕವಕ್ಕಿಯಂತಾದೆನವ್ವ

ಹೀಗೆ ದಿನವೆಲ್ಲ ಕೊರಗಿದರೂ ಅವನು ಅವರಿಗೆ ಕಾಣಸಿಗುವುದಿಲ್ಲ. ಹಗಲಿರುಳು ಅವನನ್ನು ಹಂಬಲಿಸುವರು. ಕಣ್ಣಿಗೆ ನಿದ್ದೆಯಿಲ್ಲ, ಮನಸ್ಸಿಗೆ ಶಾಂತಿಯಿಲ್ಲ. ಮೀರಾಬಾಯಿ –

ದಿನ ನಹೀಂ ಚೈನ, ರಾತ ನಹೀಂ ನಿಂದಿಯಾ
ತಡಫ ತಡಫ ಕೈ ಭೋರಕಿಯಾ.

ಹಗಲು ನೆಮ್ಮದಿಯಿಲ್ಲ, ರಾತ್ರಿ ನಿದ್ದೆಯಿಲ್ಲ. ಕೊರಗಿ ಮರುಗಿ ರಾತ್ರಿ ಕಳೆದು ಹಗಲು ಬಂದಿತು ಎಂದಿದ್ದಾಳೆ. ಅಕ್ಕ ಮಹಾದೇವಿಯೂ ಸಹ ಹೀಗೆ ತನ್ನ ದುಃಖವನ್ನು ತೋಡಿಕೊಂಡಿದ್ದಾಳೆ –

ಇರುಳು ಹಗಲು ನಿಮ್ಮ ಕಳವಳದಲ್ಲಿ ಮರೆದೊರಗಿದೆನಯ್ಯ
ಚೆನ್ನಮಲ್ಲಿಕಾರ್ಜುನಾ, ನಿಮ್ಮಲೊಲುಮೆ ನಟ್ಟು ಹಸಿವು ತೃಷೆ ನಿದ್ರೆಯ ಮರೆತೆನು

ವಿರಹಾಗ್ನಿಯಲ್ಲಿ ಅವರು ಬೆಂದಿದ್ದಾರೆ. ಹಗಲಿರುಳು ವಿರಹ ಅವರನ್ನು ಸತಾಯಿಸುತ್ತದೆ. ಒಂದು ಗಳಿಗೆಯೂ ಅವರಿಗೆ ನೆಮ್ಮದಿಯಿಲ್ಲ. ಅದಕ್ಕಾಗಿ ಮೀರಾಬಾಯಿ ತನ್ನ ವಿರಹವೇದನೆಯನ್ನು ಈ ರೀತಿ ತೋಡಿಕೊಂಡಿದ್ದಾಳೆ –

ನಿಸಿ ಬಾಸರ ಮೋಹಿ ವಿರಹ ಸತಾವೆ
ಕಲ ನ ಪರತ ಪಲ ಮೋಹೀಂ.

ಅಕ್ಕ ಮಹಾದೇವಿ ಈ ಕೆಳಗಿನಂತೆ ತನ್ನ ದುಃಖವನ್ನು ವ್ಯಕ್ತಪಡಿಸಿದ್ದಾಳೆ –

ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವಾ,
ಏರಿಲ್ಲದ ಗಾಯದಲ್ಲಿ ನೊಂದೆನವ್ವಾ.

ವಿರಹಾಗ್ನಿ ಅವರ ಶರೀರವನ್ನು ವ್ಯಾಪಿಸಿದೆ. ಈ ವಿರಹಾಗ್ನಿಯನ್ನು ಆರಿಸಲು ಮೀರಾಬಾಯಿ ತನ್ನ ಪ್ರಿಯತಮನಲ್ಲಿ ಪ್ರಾರ್ಥಿಸುತ್ತಾಳೆ –

ವಿರಹ ವೃಥಾ ಲಾಗೇ ಉರ ಅಂತರ
ಸೋ ತುಮ ಆಗ ಬಝಾವೋ.

ಈ ವಿರಹದ ಬೇಗೆ ಕಣ್ಣಿಗೆ ಕಾಣದು. ಆದರೆ ಇದರ ಜ್ವಾಲೆ ಮಾತ್ರ ಅತ್ಯಂತ ತೀವ್ರವಾದದ್ದು. ಅಂತೆಯೇ ಅಕ್ಕಮಹಾದೇವಿಗೆ ಸುಳಿದು ಬೀಸುವ ಗಾಳಿಯೂ ಕೂಡ ಬಿಸಿಯಾಗಿದೆ. ಬೆಳದಿಂಗಳೂ ಸಹ ಆಕೆಯನ್ನು ಸುಡುತ್ತಿದೆ. ಅದಕ್ಕಾಗಿ ಅವಳು ಕಳವಳಗೊಂಡಿದ್ದಾಳೆ. –

ಸುಳಿದು ಬೀಸುವ ಗಾಳಿ ಬಿಸಿಯಾಯಿತ್ತವ್ವ
ಬೆಳದಿಂಗಳು ಬಿಸಿಲಾಯಿತ್ತು.

ಇಷ್ಟೊಂದು ಕಷ್ಟಗಳನ್ನು ಸಹಿಸಿದರೂ ಅವರ ಪ್ರಿಯತಮನ ಬರವಿಲ್ಲ. ಅವನನ್ನು ಕಾಣುವ ಹಂಬಲ ತೀವ್ರವಾಗಿದೆ. ಆತುರ ಹೆಚ್ಚಾಗಿ ಎಲ್ಲರಲ್ಲೂ ಆತನನ್ನು ತೋರಿಸಲು ಹೇಳಿದ್ದಾರೆ. ಅಕ್ಕ ಮಹಾದೇವಿಯ ಆತುರ ಇಂತದ್ದು –

ಅಳಿ ಸಂಕುಳವೆ, ಮಾಮರವೆ, ಬೆಳುದಿಂಗಳೇ
ಕೋಗಿಲೆಯೇ, ನಿಮ್ಮನಿಮ್ಮನೆಲ್ಲರನು ಒಂದು ಬೇಡುವೆನು
ಎನ್ನೊಡೆಯ ಚೆನ್ನಮಲ್ಲಿಕಾರ್ಜುನ
ದೇವರನ್ನು ಕಂಡರೆ ಕರೆದು ತೋರಿರೇ.

ಮೀರಾಬಾಯಿಯೂ ಕೂಡಾ ಆಕಾಶದಲ್ಲಿನ ಮೋಡ, ಕಪ್ಪೆ, ನವಿಲು, ಚಾತಕ, ಕೋಗಿಲೆ ಹಾಗೂ ಎಲ್ಲರಲ್ಲೂ ತನ್ನ ಪ್ರಿಯತಮನ ಬರವನ್ನು ಪ್ರಾರ್ಥಿಸಿದ್ದಾಳೆ.

ಕೋಯೀ ಕಹಿಯೌರೇ, ಪ್ರಭು ಅವನಕೀ ಮನಭಾವನಕೀ ।
ಮತವಾರೆ ಬಾದಲ ಆ ಮೇರೇ, ಹರಿಕೋ ಸನೇ ಸೋ
ಕ ಬಹೂಂ ನ ಲಾಯೇರೇ ।
ದಾದುರ ಮೋರ ಪಪಯಿಯಾ ಬೋಲ್ಯೆ, ಕೋಮಲ ಸಬದ ಸುನಾಯೇ ರೇ ॥

ಅಕ್ಕಮಹಾದೇವಿ ಮತ್ತು ಮೀರಾಬಾಯಿ ಆರಾಧ್ಯ ದೇವರನ್ನು ಪತಿಯೆಂದು ಭಾವಿಸಿ, ಪ್ರೀತಿಸಿದ್ದಾರೆ. ಆ ಪತಿಯನ್ನು ಕಾಣದೆ ಈ ಸತಿಯರು ಬಗೆಬಗೆಯಾಗಿ ಹಂಬಲಿಸಿದ್ದಾರೆ. ಹಗಲಿರುಳು ಅವರಿಗೆ ಆತನದೇ ಧ್ಯಾನ, ಚಿಂತೆ. ಹಸಿವು– ಬಾಯಾರಿಕೆಗಳಿಲ್ಲ, ನಿದ್ರೆ–ವಿಶ್ರಾಂತಿಗಳಿಲ್ಲ. ಒಂದು ವೇಳೆ ನಿದ್ರೆ ಮಾಡಿದರೆ ಕನಸಿನಲ್ಲಿ ಸಹ ಆತನನ್ನೇ ಕಂಡು ಓಗ್ಗಿದ್ದಾರೆ. ಅಕ್ಕ ಮಹಾದೇವಿ ತನ್ನ ಕನಸಿನ ವರ್ಣನೆಯನ್ನು ಹೀಗೆ ಮಾಡಿದ್ದಾಳೆ –

ಅಕ್ಕಯ್ಯ ನಾನೊಂದು ಕನಸ ಕಂಡೆ
ಚಿಕ್ಕ ಚಿಕ್ಕ ಜಡೆಗಳ ನುಲಿಪಲ್ಲ ಗೊರವನು
ಭಿಕ್ಷಕ್ಕೆ ಬಂದುದನ್ನು ಕಂಡೆನವ್ವಾ
ಚೆನ್ನಮಲ್ಲಿಕಾರ್ಜುನನ ಕಂಡು ಕಣ್ತೆರೆದೆನು.

ಮೀರಾಬಾಯಿಯೂ ಸಹ ಸ್ವಪ್ನದಲ್ಲಿ ತನ್ನ ಪ್ರಿಯತಮನನ್ನು ಕಂಡು ಎಚ್ಚರವಾಗಿ ಹುಡುಕಿದಾಗ ಆತನಿಲ್ಲದೇ ಪರಿತಪಿಸಿದ್ದಾಳೆ.

ಸೋವತ ಮೇಂಹೀ ಪಲಕಾ ಮ್ಯೆ ತೋ ಪಲ ಲಾಗೀ ಪಲಮೇ ಪಿವು ಆಯೆ ।
ಮ್ಯೆ ಜೋ ಉಠೀ ಪ್ರಭು ಆದರ ದೇನೇಕೋ ಜಾಗ ಪರೀ ಪಿವೂ
ಢೂಂಡೇ ನ ಪಾಯೆ ॥

ಒಂದು ದಿನ ಅವರ ಮನಸ್ಸಿನಲ್ಲಿ ಯಾವತ್ತು ಇಲ್ಲದ ಆಸೆ ಹುಟ್ಟಿದೆ. ಅವರ ಈ ಕನಸಿನ ಪ್ರಿಯತಮ ದರ್ಶನ ನೀಡಲು ಇಂದು ಬಂದೇ ಬರುವನೆಂದು ಅವರ ನಂಬಿಕೆ. ಅವರು ಆತನ ಸ್ವಾಗತಕ್ಕೆ ಸಾಕಷ್ಟು ತಯಾರಿ ನಡೆಸಿದ್ದಾರೆ. ಅಕ್ಕಮಹಾದೇವಿಗೆ ಅದು ಬಹಳ ಸಂತಸದ ದಿನ. ಹಾಗಾಗಿ ತನ್ನನ್ನು ಅಲೌಕಿಕ ಶೃಂಗಾರಗಳಿಂದ ಸಿಂಗರಿಸಿಕೊಂಡಿದ್ದಾಳೆ. ತನ್ನ ಗೆಳತಿಯರಿಗೆ ಸಂತೋಷದ, ಆತುರದ ಆಮಂತ್ರಣವಿತ್ತಿದ್ದಾಳೆ –

ಇಂದೆನ್ನ ಮನೆಗೆ ಗಂಡ ಬಂದಿಹನೆಲಗವ್ವಾ,
ನಿಮನಿಮಗೆಲ್ಲ ಶೃಂಗಾರ ಮಾಡಿಕೊಳ್ಳಿ

ಮಲ್ಲಿಕಾರ್ಜುನನೀಗಳೇ ಬಂದಿಹನು
ಇದಿರುಗೊಳ್ಳ ಬನ್ನಿರೇ ಅವ್ವಗಳಿರಾ?

ಮೀರಾಬಾಯಿಯೂ ಸಹ ತನ್ನ ಗೆಳತಿಯರಲ್ಲಿ ಓಗೆ ಹೇಳುತ್ತಿದ್ದಾಳೆ. ಪ್ರಿಯತಮನು ಬಂದಿದ್ದಾನೆ. ಮಂಗಳ ಗಾಯನ ಮಾಡಿರಿ.

ಸೇಜ ಸಾಂವರಿಯಾ ಪಿವ ಘರ ಆವಾ–
ಸಖಿಂಯಾ ಮಂಗಲ ಗಾಯೋ ॥

ಅಕ್ಕಮಹಾದೇವಿ ಮತ್ತು ಮೀರಾಬಾಯಿ ಪುರುಷ ಮತ್ತು ಸ್ತ್ರೀಯ ಮಧ್ಯದಲ್ಲಿರುವ ಪವಿತ್ರ ಹಾಗೂ ಮರ್ಯಾದೆಯಿಂದ ಕೂಡಿದ ಪ್ರೇಮವನ್ನು ಅವರು ತಮ್ಮ ಅಲೌಕಿಕ ಪತಿಯಲ್ಲಿ ತೋರಿಸಿದ್ದಾರೆ. ಈ ಪ್ರೇಮ ಬಂಧನವನ್ನು ದೃಢವಾಗಿಸಲು ಆ ಪರಮಾತ್ಮನೊಂದಿಗೆ ಲೌಕಿಕ ಸಂಬಂಧ ಬೆಳೆಸಲೂ ಅವರು ತಯಾರಾಗಿದ್ದಾರೆ. ಅವರ ಪತಿ ಅಲೌಕಿಕ, ಹಾಗಾಗಿ ಅವರ ವಿವಾಹವೂ ಕೂಡ ಅಲೌಕಿಕವೇ. ಅಕ್ಕಮಹಾದೇವಿಯ ವಿವಾಹದಲ್ಲಿ ಗುರುವೇ ತೆತ್ತಿಗನಾದರೆ, ಲಿಂಗನೇ ಮದುಮಗ. ಭೂಮಿಯಲ್ಲಿಯ ಭಕ್ತರೆಲ್ಲರೂ ದಿಬ್ಬಣಿಗರಾಗಿದ್ದಾರೆ. ಲೌಕಿಕ ವಿವಾಹ ಬಂಧವನ್ನು ಬೇಕಾದಾಗ ಕಳಚಬಹುದು. ಆದರೆ ಅಕ್ಕಮಹಾದೇವಿ "ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ" ಎಂದು ಆಧ್ಯಾತ್ಮಿಕ ವಿವಾಹ ಬಂಧನವು ಶಾಶ್ವತ ಎಂದು ತೋರಿಸಿದ್ದಾಳೆ. ಆತ್ಮ ಕೊರಗಿ – ಕೊರಗಿ ಕೊನೆಗೆ ಪರಮಾತ್ಮನಲ್ಲಿ ಲೀನವಾಗುವಂತೆ ಇವರಿಬ್ಬರೂ ತಮ್ಮ ಪ್ರಿಯತಮರಲ್ಲಿ ಸೇರಿದ್ದಾರೆ. ಮೀರಾಬಾಯಿಯ ವಿವಾಹದ ಸಂದರ್ಭದಲ್ಲಿ ಐವತ್ತಾರು ಕೋಟಿ ದೇವತೆಗಳು ದಿಬ್ಬಣಿಗರಾಗಿ ಬಂದಿದ್ದಾರೆ. ಗಿರಿಧರ ಗೋಪಾಲನೇ ಮದುಮಗ. ಪೂರ್ವಜನ್ಮದ ಪುಣ್ಯದಿಂದ ಈ ವರ ಸಿಕ್ಕಿದ್ದಾನೆ. ಮೀರಾಳಿಗೆ ಚಿರ ಮುತ್ತೈದೆತನ ಪ್ರಾಪ್ತವಾಗಿದೆ. ಆಕೆಯೇ ಈ ರೀತಿ ಹೇಳಿದ್ದಾಳೆ –

ಮಾಯೀ ಮ್ಹಾಂರೋ ಶುಪಣಾಮಾ ಷರಣ್ಯಾ ದೀನನಾಥ ।
ಛಪ್ಪನ ಕೋಟ್ಯಾಂ ಜನಾಂ ಪಧಾರ್ಯ ದೂಲ್ಹೋ ಸಿರೀ ವೃಜನಾಥ ।
ಶುಪಣಾಮಾಂ ತೋರಣ ಬಂಧ್ಯಾರೀ ಶರಪಣಾಮಾಂ ಗಹನಾಹಾಥ ।
ಶುಪಣಾಮಾಂ, ಮ್ಹಾರೋ ಪರಣ ಗಯಾ ಪಾಯಾ ಅಚರ ಸುಹಾಗ ।
ಮೀರಾ ರೀ ಗಿರಿಧರ ಮಿಲ್ಯಾರೀ ಪುರಬ ಜನಮರೀ ಭಾಗ ॥

ಯುಗಯುಗಾಂತರಗಳಿಂದಲೂ ಪ್ರೇಮಮಯೀ ಸ್ತ್ರೀಯರು ತಮ್ಮ ಮಾನ, ಮರ್ಯಾದೆ, ಜ್ಞಾನ, ಬುದ್ಧಿ, ವಿವೇಕ ಎಲ್ಲವನ್ನೂ ಬದಿಗೊತ್ತಿ ತಮ್ಮ ಪತಿಯ ಮನೆಗೆ ಹೋಗಿ ಅವರ ಸುಖಕ್ಕಾಗಿ

ತಮ್ಮದೆಲ್ಲವನ್ನೂ ಸಮರ್ಪಿಸಿದ್ದಾರೆ. ಈ ಸಮರ್ಪಣೆಯೇ ಪ್ರೇಮದ ಕೊನೆಯ ಹಂತ. ಅದೇ ಮಧುರ ಭಕ್ತಿಯ ಅತ್ಯುತ್ಕೃಷ್ಠ ಸಾಧನೆ. ಸರ್ವಸ್ವವನ್ನೂ ಸಮರ್ಪಿಸಬಲ್ಲ ನಾರಿ ಜನ್ಮಜನ್ಮಾಂತರಗಳಿಂದ ಇದನ್ನೇ ತನ್ನ ಸಾಮರ್ಥ್ಯವೆಂದು ಭಾವಿಸಿದ್ದಾರೆ, ನಂಬಿದ್ದಾರೆ. ಮೀರಾ ಮತ್ತು ಅಕ್ಕಮಹಾದೇವಿ ಸಹ ಇದಕ್ಕೆ ಅಪವಾದವಲ್ಲ. ಮೀರಾಬಾಯಿ ಗಿರಿಧರ ಗೋಪಾಲನ ಮನೆಗೆ ಹೋಗಿದ್ದಾಳೆ. ಆತನೇ ಅವಳ ಪ್ರಿಯತಮ. ಪ್ರಿಯ ಪತಿ. ಹಗಲು-ರಾತ್ರಿ ಆತನೊಂದಿಗೆ ಕಳೆದಿದ್ದಾಳೆ. ಆತನು ಕೊಟ್ಟುದ್ದನ್ನು ತೊಟ್ಟದ್ದಾಳೆ. ಹಾಕಿದ್ದನ್ನು ಉಂಡಿದ್ದಾಳೆ. ಕೂರಲು ಹೇಳಿದಲ್ಲಿ ಕುಳಿತಿದ್ದಾಳೆ. ಪತಿ ಆಕೆಯನ್ನು ಮಾರಿದರೂ ಆಕೆಗೆ ಚಿಂತೆಯಿಲ್ಲ. ಅವರಿಬ್ಬರ ಪ್ರೀತಿ ಅತ್ಯಂತ ಪ್ರಾಚೀನವಾದುದು. ಅವನನ್ನು ಬಿಟ್ಟು ಒಂದು ಕ್ಷಣ ಸಹ ಇರಲು ಸಾಧ್ಯವಿಲ್ಲ. –

ರಾಣಾಜೀ ಮ್ಹೆಂ ಗಿರಿಧರಕೆ ಘರ ಜಾವೂಂ ।
ಗಿರಿಧರ ಮ್ಹಾರೋ ಸಾಂಚೋ ಪ್ರೀತಮ ದೇಖಿತ ರೂಪ ಲುಭಾವೂಂ ।
ರೈನ ಪಡೆ ತಬ ಹೀ ಉಠ ಜಾಸೂಂ, ಭರ ಭಯೋ ಉಠ ಆವೂಂ ।
ರೈನ ದಿನ ವಾಕೇ ಸಂಗ ಖೇಲೂಂ ಜ್ಯೋ ರೀಝೋ ತ್ಯೋಂ ರಿಝಾವೂಂ ।
ಜೋ ಪಹಿರಾವೆ ಸೋಯೀ ಪಹಿರೋಂ, ಜೋದೇ ಸೋಯೀ ಬಾವೂರಿ ।
ಮೇರಾ ಉನಕೀ ಪ್ರೀತ ಪುರಾಣೇ ಉನ ಬಿನ ಪಲನ ರಹವೂಂ ।
ಜಹಾಂ ಬೈಠಾವೈ ತಿತಹೀ ಬೈಠೂಂ, ಬೇಚೇ ತೋ ಬಿಕ ಜಾವೂಂ ॥"

ಅಕ್ಕ ಮಹಾದೇವಿಯೂ ಸಹ ಇದೇ ಸಮರ್ಪಣೆ, ಪತಿನಿಷ್ಠೆ ತೋರಿದ್ದಾಳೆ –

ನಾನು ನಿನಗೊಲಿದೆ ನೀನು ನನಗೊಲಿದೆ
ನೀನೆನ್ನಗಲದಿಪ್ಪೆ ನಾನಿನ್ನಗಲದಿಪ್ಪೆ ನಿನಗೆ ನನಗೆ ಬೇರೊಂದು ಠಾವುಂಟೆ?
ನೀನಿರಿಸಿದ್ದ ಗತಿಯೊಳಗೆ ಇಪ್ಪಳಾನಯ್ಯ

ಈ ಸಮರ್ಪಣೆಯೇ ಮೀರಾಬಾಯಿ ಮತ್ತು ಅಕ್ಕಮಹಾದೇವಿಯರನ್ನು ಅಮರರನ್ನಾಗಿಸಿದೆ. ನಾನು ನೀವು ಎಂಬ ಅಂತರವನ್ನು ಮರೆತು ಅವರ ತಮ್ಮ ತಮ್ಮ ಪ್ರಿಯತಮರಲ್ಲಿ ಬೆರೆತಿದ್ದಾರೆ. ಇದು ಅವರ ಜೀವನದ ಅಂತಿಮ ಘಟ್ಟ, ಅನುಭಾವದ ಕೊನೆಯ ಮೆಟ್ಟಲು. ಅನುಭಾವವೆಂಬುದು ನಿಜ ನಿವಾಸದಲ್ಲಿರಿಸುವುದು.

ಅಕ್ಕಮಹಾದೇವಿ ಮತ್ತು ಮೀರಾಬಾಯಿ ತಮ್ಮ ನಿಜನಿವಾಸವನ್ನು ಪಡೆದು ಮನಸ್ಸಿನ ದುಃಖ ದುಮ್ಮಾನಗಳಿಂದ ಮುಕ್ತರಾಗಿದ್ದಾರೆ. ಪ್ರಪಂಚದ ಒಡನಾಟ ಅವರಿಗೆ ಸಾಕಾಗಿದೆ. ಅದಕ್ಕಾಗಿ ಅವರು

ತಮ್ಮ ತಮ್ಮ ಆರಾಧ್ಯ ದೇವರನ್ನು ಹುಡುಕಿಕೊಂಡು ಹೊರಟಿದ್ದಾರೆ. ಅಕ್ಕ ಮಹಾದೇವಿ ಶ್ರೀಶೈಲಕ್ಕೆ ಹೊರಟರೆ ಮೀರಾಬಾಯಿ ದ್ವಾರಕೆಗೆ ಹೊರಟಿದ್ದಾಳೆ. ಮೀರಾಬಾಯಿಯು ದ್ವಾರಕೆಯ ರಣಛೋಡಜಿಯ ಮೀರ್ತಿಯಲ್ಲಿ ವಿಲೀನಳಾದರೆ ಅಕ್ಕಮಹಾದೇವಿ ಶ್ರೀಶೈಲದ ಚನ್ನಮಲ್ಲಿಕಾರ್ಜುನನಲ್ಲಿ ಮಿಲನಹೊಂದಿದಳು.

ಮೀರಾಬಾಯಿ ದ್ವಾರಕೆಗೆ ಬಂದು ಅಲ್ಲಿಯ ರಣಛೋಡಜಿಯ ಮಂದಿರದಲ್ಲಿ ಭಜನ ಕೀರ್ತನಗಳಲ್ಲಿ ಕಾಲ ಕಳೆಯುತ್ತಾಳೆ. ಅವಳನ್ನು ಮತ್ತೆ ಮೇವಾಡಕ್ಕೆ ಕರೆತರುವ ಪ್ರಯತ್ನವನ್ನು ರಾಣಾ ಉದಯಸಿಂಹ ಮತ್ತು ಜಯಮಲ್ಲ ಮಾಡುತ್ತಾರೆ. ಅದಕ್ಕಾಗಿ ಬ್ರಾಹ್ಮಣರನ್ನು ಕಳುಹಿಸುತ್ತಾರೆ. ಅವರು ದ್ವಾರಕೆಗೆ ಬಂದು ಎಷ್ಟು ವಿನಂತಿಸಿಕೊಂಡರೂ ಆಕೆ ಮೇವಾಡಕ್ಕೆ ಹಿಂತಿರುಗಲು ನಿರಾಕರಿಸುತ್ತಾಳೆ. ಆಗ ಅವರು ಸತ್ಯಾಗ್ರಹವನ್ನು ಮಾಡುತ್ತಾರೆ. ಬ್ರಾಹ್ಮಣರ ಈ ರೀತಿ ಆಕೆಗೆ ಇಷ್ಟವಾಗುವುದಿಲ್ಲ. ಈಗ ಆಕೆಗೆ ಐಹಿಕ ಜಗತ್ತಿನ ಕಡೆಗೆ ಒಲವೇ ಇರಲಿಲ್ಲ. ತನ್ನ ಮನಸ್ಸೆಲ್ಲವನ್ನೂ ಸಂಪೂರ್ಣವಾಗಿ ರಣಛೋಡಜಿಯಲ್ಲಿ ಕೇಂದ್ರೀಕರಿಸಿದ್ದಳು.

ಒಂದು ದಿನ ಮೀರಾಬಾಯಿ ರಣಛೋಡಜಿಯ ಮಂದಿರದಲ್ಲಿ ತನ್ಮಯಳಾಗಿ ಹಾಡುತ್ತಿದ್ದಾಳೆ. ಅವಳ ಮುಖದಲ್ಲಿ ಅಪರೂಪದ ಕಳೆಯಿದೆ. ವಾಣಿಯಲ್ಲಿ ಭಕ್ತಿಧಾರೆಯಾಗಿ ಪ್ರವಹಿಸುತ್ತಿದೆ. ರಣಛೋಡಜಿಯು ಆಕೆಯ ಮನಸ್ಸನ್ನು ಹರಣ ಮಾಡಿದ್ದಾನೆ. ಅವನ ಸುಂದರ ರೂಪವನ್ನು ಮನಸಾರೆ ಹೊಗಳಿದ್ದಾಳೆ. ಆತ ಆಕೆಯ ಕೈಹಿಡಿದಿದ್ದಾನೆ –

ಮ್ಹಾರೋ ಮಣ ಹರ ಲೀಣ್ಯಾ ರಣಛೋಡ ।
ಮೋರ ಮುಕುಟ ಶಿರ ಛತ್ರ ಬಿರಾಜಾಂ ಕುಂಡಲರೀ ಛವ ಔರ ।
ಚರಣ ಪಖಾದ್ಯಾ ರತಣಾಕರರೀ ಧಾರಾ ಗೋಮತ ಚೋರ
ಧ್ವಜಾಪತಾಕಾ ತಟತಟ ರಾಜಾಂ, ಝಾಲರ ರೀ ಝುಕರ್ಝೋ ಡ ।
ಭಗತ ಜಾಣ್ಯಾರೋಕಾಜ ಸಂವಾರ್ಯಾ ಮ್ಹಾರಾ ಪ್ರಭು ರಣಛೋಡ ।
ಮೀರಾ ರೇ ಪ್ರಭು ಗಿರಿಧರ ನಾಗರ ಕರಗಹ್ಯೋ ನಂದ ಕಿಶೋರ ॥

ಎಂದು ಮೀರಾಬಾಯಿ ಭಾವೋದ್ರೇಕದಿಂದ ಹಾಡಿದ್ದಾಳೆ. ಕೈಹಿಡಿದ ಶ್ರೀ ಕೃಷ್ಣ ತನ್ನನ್ನು ಬಿಡನೆಂಬ ನಂಬಿಕೆ ಆಕೆಗಾಗಿದೆ. ಆ ನಂಬಿಕೆಯಲ್ಲಿ ಆಕೆ ಪುನಃ ತನ್ನನ್ನು ಮರೆತು ಹಾಡಿದ್ದಾಳೆ –

ಅಬತೋ ನಿಬಾಯಾ ಬಾಹ ಗಹ್ಯಾರೀ ಡಾಜ ।
ಜುಗಜುಗ ಭೀರ ಹರ್ಯಾ, ಭಗತಾರೀ ದೀಣ್ಯಾ ಮೋಕ್ಷನೇವಾಜ ।
ಮಿರಾ ಶರಣ ಗಹ್ಯಾ ಚರಣಾರೀ ಲಾಜ ರಝ್ಯಾ ಮಹಾರಾಜ ॥

ಈ ಹಾಡು ಮಂದಿರದಲ್ಲಿ ಪ್ರತಿಧ್ವನಿಸುತ್ತಿದೆ. ಒಮ್ಮಿಂದೊಮ್ಮೆಲೇ ಇಡೀ ಮಂದಿರವೇ ನಡುಗಿದ ಅನುಭವ ಆಗುತ್ತದೆ. ಮೀರಾಬಾಯಿಗೆ ಎಚ್ಚರವಿಲ್ಲ. ಮೂರ್ತಿ ಸಜೀವವಾಗಿದೆ. ಮಂದಿರವೆಲ್ಲ ಒಮ್ಮೆಲೆ ಕತ್ತಲು ಆವರಿಸಿದೆ. ಮೀರಾಬಾಯಿಯ ಸ್ವರ ಮಾತ್ರ ಕೇಳಿ ಬರುತ್ತಿದೆ –

ದಾಸಿ ಮೀರಾ ಲಾಲ ಗಿರಿಧರ ಹರ್ಯಾ ಮ್ಹಾರೀ ಪೀರ ॥

ಗಿರಿಧರ ಗೋಪಾಲ ಆಕೆಯ ಕಷ್ಟವನ್ನು ದೂರಮಾಡಿದ್ದಾನೆ. ಆಕೆಯ ಧ್ವನಿ ಕ್ಷೀಣಿಸುತ್ತ ಬರುತ್ತದೆ. ಕತ್ತಲೆ ಕಳೆದು ಪುನಃ ಬೆಳಕಾದಾಗ ಮಂದಿರದಲ್ಲಿ ಮೀರಾ ಇರಲಿಲ್ಲ. ರಣಛೋಡಜಿಯು ಆಕೆಯನ್ನು ತನ್ನಲ್ಲಿಗೆ ಬರಮಾಡಿಕೊಂಡಿದ್ದಾನೆ. ಮೀರಾ ತನ್ನ ಪ್ರಿಯತಮನಲ್ಲಿ ಮಿಲನ ಹೊಂದಿದ್ದಾಳೆ. ಆತ್ಮ ಪರಮಾತ್ಮನಲ್ಲಿ ವಿಲೀನವಾಗಿದೆ.

ಅಕ್ಕಮಹಾದೇವಿ ಕಲ್ಯಾಣದಿಂದ ಹೊರಟು ನೇರವಾಗಿ ಶ್ರೀಶೈಲಕ್ಕೆ ಬಂದಿದ್ದಾಳೆ. ಗಿರಿಯನ್ನೇರಿ ಚೆನ್ನಮಲ್ಲಿಕಾರ್ಜುನನ ಕೈಹಿಡಿಯಲು ಕದಳಿ ಬನದಲ್ಲಿ ಸುತ್ತಾಡಿದ್ದಾಳೆ. ಕದಳಿ ಬನದಲ್ಲಿ ಆತನ ಚೆಲುವನ್ನು ನೋಡಿ ತನ್ನ ಅಮರ ವಾಣಿಯಿಂದ ಆ ಸುಂದರ ಮೂರ್ತಿಯ ವರ್ಣನೆ ಮಾಡಿದ್ದಾಳೆ. ಚೆನ್ನಮಲ್ಲಿಕಾರ್ಜುನನ ನಿಲುವನ್ನು ಕಂಡು ಆಕೆ ಬದುಕಿದ್ದಾಳೆ. ಕದಳೀ ಬನದಲ್ಲಿ ಆತನನ್ನು ಕಂಡು ಈ ಲೋಕದಿಂದ ಮುಕ್ತಳಾಗಿದ್ದಾಳೆ –

ಕದಳಿಯ ಬನದಲ್ಲಿ ಭವಹರ ಕಂಡೆನು
ಭವಗೆಟ್ಟ ಮಗಳೆಂದು ಕರುಣದಿಂ ತೆಗೆದು ಬಿಗಿದಪ್ಪಿದರೆ
ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿಹೆನು

ಎಂದು ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿ, ಎಲ್ಲಾ ಆಶೆಗಳಿಂದ ಮುಕ್ತಳಾಗಿ ಆಶಾತೀತವಾಗಿ ಮೆರೆದಿದ್ದಾಳೆ. ಕ್ರಿಯೆಗಳನ್ನು ಅಳಿದು ಕ್ರಿಯಾತೀತಳಾಗಿದ್ದಾಳೆ –

ಕ್ರಿಯೆಗಳೆಲ್ಲವ ನಿಲಿಸಿ
ಕ್ರಿಯಾತೀತನಾಗಿ ನಿಪ್ಪತ್ತಲಿಂಗೈಕ್ಯನಾದೆ
ನಾನೆಂಬುದ ನಿಲಿಸಿ, ನೀನೆಂಬುದ ಕೆಡಿಸಿ
ಉಭಯ ಲಿಂಗೈಕ್ಯ ಮಾಡಿದೆ.

ಹೀಗೆ ತನ್ನ ಪ್ರಿಯತಮ ಚೆನ್ನಮಲ್ಲಿಕಾರ್ಜುನನನ್ನು ಸೇರಿಕೊಂಡಿದ್ದಾಳೆ. ಶರಣಸತಿ ಲಿಂಗಪತಿಯೊಡಗೂಡಿದ್ದಾಳೆ.

## ಸಂದರ್ಭ ಸೂಚಿ

**ಡಾ. ಪಿ. ವಿ. ನಾರಾಯಣ**

ವಚನಸಾಹಿತ್ಯ, ೧೯೯೭, ಪುಟ ೯೯

**ಡಾ. ಕೃಷ್ಣದೇವ ಶರ್ಮ**

ಭಕ್ತಿಕಾಲೀನ ಕೃಷ್ಣಕಾವ್ಯ ಕಾ ಅಧ್ಯಯನ, ೧೯೭೩, ಪುಟ ೨೬೬

ಭಕ್ತಿಕಾಲೀನ ಕೃಷ್ಣ ಕಾವ್ಯಕಾ ಅಧ್ಯಯನ ೧೯೭೩ ಪುಟ ೨೬೮

# ಅಧ್ಯಾಯ ೫ : ತೌಲನಿಕ ಸಮೀಕ್ಷೆ

೧೨ರಿಂದ ೧೪ನೆಯ ಶತಮಾನದ ಕಾಲಾವಧಿ ಭಾರತದ ಇತಿಹಾಸ, ಧಾರ್ಮಿಕ, ಸಾಮಾಜಿಕ ಹಾಗೂ ಸಾಹಿತ್ಯಿಕ ಕ್ಷೇತ್ರಗಳಲ್ಲಿ ಮಹತ್ವದ ಬದಲಾವಣೆಯನ್ನು ತಂದ ಮಾನವನ ಪುನರ್ಜಾಗರಣದ ಸಮಯ. ಜಾತಿ, ಮತ, ಪಂಥಗಳಿಂದ ಮುಕ್ತನಾಗಿ ಸರ್ವಸಮಾನತೆಗೆ ಮಾನವ ಹವಣಿಸಿದ ಕಾಲ. ಅಂದಿನ ಧಾರ್ಮಿಕ ಮುಂದಾಳುಗಳು ಸ್ವತಂತ್ರ, ಉದಾರ ಮನಸ್ಥಿತಿಯವರಾಗಿದ್ದರು. ಜಾತ್ಯತೀತ, ಮತಾತೀತವಾದ ಸಮಾಜವನ್ನು ನಿರ್ಮಿಸಲು ಪ್ರಯತ್ನಿಸಿದರು. ದೇವರು ಧರ್ಮಾಚರಣೆಗಳು ಕೇವಲ ಕೆಲವರಿಗೆ ಮಾತ್ರ ಮೀಸಲಾಗಿರದೆ ಎಲ್ಲರಿಗೂ ಮುಕ್ತ ಪ್ರವೇಶವನ್ನು ಕಲ್ಪಿಸಿ, ಅಂಧಶ್ರದ್ಧೆ, ಕಂದಾಚಾರಗಳನ್ನು ವಿರೋಧಿಸಿ – "ಭಕ್ತಿಯೊಂದೇ ದೇವರನ್ನು ಒಲಿಸುವ ದಾರಿ" ಎಂಬ ಕಲ್ಪನೆಯನ್ನು ಆಚರಣೆಯ ಮೂಲಕ ಮನುಕುಲಕ್ಕೆ ತೋರಿಸಿಕೊಟ್ಟರು. ಈ ರೀತಿ ಭಕ್ತಿಗೆ ವಿಶೇಷವಾದ ಪ್ರಾಮುಖ್ಯತೆ ದೊರಕಿದ್ದರಿಂದ ಇದು ಭಕ್ತಿಯುಗವಾಯಿತು. ಈ ಯುಗದ ಸಾಹಿತ್ಯವೂ ಕೂಡ ಭಕ್ತಿಸಾಹಿತ್ಯವಾಯಿತು.

ಕಾವ್ಯರಚನೆ ಈ ಯುಗದ ಭಾರತೀಯ ಸಾಹಿತ್ಯದ ಉದ್ದೇಶವಾಗಿರಲಿಲ್ಲ. ಪತಿತ ಮಾನವನಿಗೆ ದೈವೀ ಸಂದೇಶವನ್ನು ತಲುಪಿಸುವುದು ಅವರ ಮುಖ್ಯ ಉದ್ದೇಶವಾಗಿತ್ತು. ಈ ಅಮರ ಸಾಹಿತ್ಯದ ನಿರ್ಮಾಪಕರು ತಮ್ಮ ತಮ್ಮ ಕ್ಷೇತ್ರದ ದೇವದೂತರು. ಅವರ ಸಾಹಿತ್ಯ ನಿರ್ಮಾಪಕರು ತಮ್ಮ ತಮ್ಮ ಕ್ಷೇತ್ರದ ದೇವದೂತರು. ಅವರ ವಾಣಿ ತಮ್ಮ ಇಷ್ಟದೈವದಿಂದ ವರವಾಗಿ ಪಡೆದ ಸಿದ್ಧವಾಣಿ. ಕೋಗಿಲೆಯ ಇಂಚರದಂತೆ ಕಾವ್ಯಸಿದ್ಧಿ ಇವರಿಗೆ ಅನಾಯಾಸವಾಗಿ ಬಂದಿದೆ. ತಮ್ಮ ಮಧುರ ವಾಣಿಯಿಂದ ಜನಮನವನ್ನು ತಣಿಸಿದ ಹಾಗೂ ಎಚ್ಚರಿಸಿದ ಅಕ್ಕಮಹಾದೇವಿ ಬನವಾಸಿಯ ಕೋಗಿಲೆ ಹಾಗೂ ಮೀರಾಬಾಯಿ ಮೇವಾಡದ ಕೋಗಿಲೆ.

ಬನವಾಸಿಗೆ ಸಮೀಪ ಬಸವಾಡಿ ಶರಣರು ಕಟ್ಟಿದ ನೂತನ ಸಮಾಜದಲ್ಲಿ (೧೨ನೆ ಶತಮಾನ) ಅಕ್ಕ ಪಾತ್ರಧಾರಿಯಾದರೆ ಮೀರಾ ಯಾವ ದೇಶವನ್ನು ನೆನೆಸಿಕೊಂಡರೆ ಮೊಗಲ ಸಾಮ್ರಾಟರು ಧೈರ್ಯಗುಂದುತ್ತಿದ್ದರೋ ಆ ಮೇವಾಡದ ಮರುಭೂಮಿಯಲ್ಲಿ, ರಣಕಹಳೆಯ ಮಧ್ಯದಲ್ಲಿ, ಮಾತೃಭೂಮಿಯ ರಕ್ಷಣೇಗಾಗಿ ವೀರರು ಸುರಿಸಿದ ರಕ್ತದ ಕೆಸರಿನಲ್ಲಿ ಹುಟ್ಟಿ ಮೇಡತಾ ಪ್ರದೇಶದ ಭಕ್ತಿಯುಗದ ಸಂಚಾಲಕಿಯಾದಳು. 'ಕುಡಕಿ' ಗ್ರಾಮ ಆ ಭಾಗ್ಯವನ್ನು ಪಡೆಯಿತು. ಇದು ೧೬ನೆಯ ಶತಮಾನದ ಮಾತು.

ಉಡುತಡಿಯ ಒಂದು ಮಧ್ಯಮವರ್ಗದ ಪರಿವಾರದಲ್ಲಿ ಅಕ್ಕಮಹಾದೇವಿಯ ಜನನವಾಯಿತು. ತಾಯಿ ತಂದೆಗಳಾದ ಸುಮತಿ-ನಿರ್ಮಲಶೆಟ್ಟರು ಮಹಾ ಶಿವಭಕ್ತರೂ, ಆಚರಣವಂತರೂ ಸದ್ಗುಣಿಗಳು ಆಗಿದ್ದರು. ಚೆನ್ನಮಲ್ಲಿಕಾರ್ಜುನ ಅವರ ಕುಲದೇವರು. ತಮ್ಮ ಕುಲದೇವರ ಆರಾಧನೆಯಲ್ಲಿಯೇ ಅವರು ಕಾಲಕಳೆಯುತ್ತಿದ್ದರು. ಬಾಲ್ಯದಲ್ಲಿಯೇ ಅಕ್ಕಮಹಾದೇವಿ ತನ್ನ ತಾಯಿ ತಂದೆಗಳೊಂದಿಗೆ ಚೆನ್ನಮಲ್ಲಿಕಾರ್ಜುನನ ಉಪಾಸನೆಯಲ್ಲಿ ತೊಡಗಿದಳು. ತಂದೆ-ತಾಯಿಗಳ ಭಕ್ತಿ ಅಕ್ಕಮಹಾದೇವಿಯ ಕೋಮಲ ಮನಸ್ಸಿನ ಮೇಲೆ ಅಪಾರ ಪ್ರಭಾವವನ್ನು ಬೀರಿತು. ಈ ಎಳೆ ಮನಸ್ಸಿನಲ್ಲಿ ಅಡಗಿದ್ದ ಆ ಭಕ್ತಿಯ ಕೆಂಡವನ್ನು ಗುರುಲಿಂಗದೇವರು ಲಿಂಗದೀಕ್ಷೆಯನ್ನು ನೀಡಿ ಇನ್ನಷ್ಟು ಪ್ರಜ್ವಲಿಸುವಂತೆ ಮಾಡಿದರು. ಗುರುವಿನ ಬಾಯಿಯಿಂದ ಶ್ರೀಶೈಲ ಚೆನ್ನಮಲ್ಲಿಕಾರ್ಜುನನ ಮಹಿಮೆಯನ್ನು ಕೇಳಿ ಅಕ್ಕ ಮಹಾದೇವಿ ಆತನಿಗೆ ಮಾರುಹೋದಳು. ಅವನೇ ತನ್ನ ಗಂಡನೆಂದು ನಂಬಿ ಆತನನ್ನು ನೋಡಲು ಹಾತೊರೆದಳು. ಬಾಲ್ಯದಲ್ಲಿಯೇ ಆಕೆ ಆಟಪಾಟಗಳನ್ನು ಮರೆತು ಶಿವನೊಡನೆ ಆಟವಾಡಲು ಹಂಬಲಿಸುತ್ತಿದ್ದಳು. ಹುಟ್ಟಿದಾಗಲೇ ಗುರು ವಿಭೂತಿಯನ್ನು ಹಚ್ಚಿ ಲಿಂಗಧಾರಣೆ ಮಾಡುವನು. ಗುರುವಿನ ಸಮ್ಮುಖದಲ್ಲಿ ತನ್ನ ಪ್ರಿಯತಮನಾದ ಚೆನ್ನಮಲ್ಲಲಿಕಾರ್ಜುನನನ್ನು ಕಂಡು ಧನ್ಯಳಾಗಿದ್ದಾಳೆ.

ಚೆನ್ನಮಲ್ಲಿಕಾರ್ಜುನಯ್ಯ, ನಾ ಹುಟ್ಟಿದೊಡನೆ
ವಿಭೂತಿಯ ಪಟ್ಟವ ಕಟ್ಟಿ ಸದ್ಗುರು ಸ್ವಾಮಿಲಿಂಗ
ಸ್ವಾಯತವ ಮಾಡಿದನಾಗಿ ಧನ್ಯಳಾದೆನು

ಈ ರೀತಿ ಲಿಂಗದ ಒಡನಾಟದಲ್ಲಿ ತೊಡಗಿದ ಅಕ್ಕಮಹಾದೇವಿಗೆ ಲೌಕಿಕ ಆಟಪಾಟಗಳನ್ನು ರುಚಿಸುವುದಿಲ್ಲ.

ಕುಡಕಿಯ ಗ್ರಾಮದಲ್ಲಿ ೧೫೫೦-೬೦ರ ಆಸುಪಾಸಿನಲ್ಲಿ ಮೀರಾಬಾಯಿಯ ಜನನವಾಯಿತು. ಮೇವಾಡದ ವೀರ ಸಾಸಕ ರಾಠೋಡರಾವ ದೂದಾಜಿಯ ಮಗ ರತ್ನಸಿಂಹನ ಮಗಳು ಈಕೆ. ಆತ ವೀರ ಸೇನಾನಿಯಾಗಿದ್ದನು. ಯುದ್ಧದಲ್ಲಿ ಮೃತ್ಯುವಶನಾದ. ತಾಯಿಯೂ ಇದೇ ದಾರಿಯನ್ನು ಅನುಸರಿಸಿದಳು. ಬಾಲ್ಯದಲ್ಲಿಯೇ ತಂದೆ ತಾಯಿಗಳನನು ಕಳೆದುಕೊಂಡ ಮೀರಾಬಾಯಿ ತಾತ ರಾವದೂದಾಜಿಯ ಪ್ರೀತಿಯ ಪಾಲನೆ ಪೋಷಣೆಯಲ್ಲಿ ಬೆಳೆದಳು. ರಾವ್ದೂದಾಜಿ ಪರಮ ವೈಷ್ಣವ ಭಕ್ತ. ಸಾಧು ಸಂತರ ಬಗ್ಗೆ ಈತನಿಗೆ ಅಪಾರವಾದ ಗೌರವ ಇತ್ತು. ಒಮ್ಮೆ ಒಬ್ಬ ಸಾಧು ಇವರಲ್ಲಿಗೆ ಬಂದನು. ಆ ಸಾಧುವಿನ ಬಳಿ ಶ್ರೀಕೃಷ್ಣನ ಸುಂದರವಾದ ಮೂರ್ತಿ ಇತ್ತು. ಮೀರಾಳಿಗೆ ಆ ಮೂರ್ತಿಯ ಮೇಲೆ ಮನಸ್ಸಾಯಿತು. ಅದು ತನಗೆ ಬೇಕೇ ಬೇಕೆಂದು ಹಟ

ಹಿಡಿದಳು. ಆದರೆ ಆ ಸಾಧು ಆ ಮೂರ್ತಿಯನ್ನು ಕೊಡದೇ ಹೊರಟು ಹೋದ. ಏಕೆಂದರೆ ಆತನೂ ಅದನ್ನು ಬಿಟ್ಟಿರಲಾರ. ಮೀರಾಬಾಯಿ ಆ ಮೂರ್ತಿಗಾಗಿ ಪರಿತಪಿಸಿದಳು, ಆಹಾರ, ನೀರನ್ನು ತ್ಯಜಿಸಿದಳು. ಕೊನೆಗೆ ಆಕೆಯ ಸತ್ಯಾಗ್ರಹ ಫಲಿಸಿತು. ಮೂರ್ತಿಯನ್ನು ಮೀರಾಬಾಯಿಗೆ ಕೊಡಲು ದೇವರು ಆ ಸಾಧುವಿಗೆ ಕನಸಿನಲ್ಲಿ ಆಜ್ಞೆ ಮಾಡಿದನಂತೆ. ಹಾಗಾಗಿ ಆತ ತಿರುಗಿ ಬಂದು ಮೂರ್ತಿಯನ್ನು ಮೀರಾಬಾಯಿಗೆ ಒಪ್ಪಿಸಿದ. ಮೂರ್ತಿಯನ್ನು ಪಡೆದ ಮೀರಾ ಧನ್ಯಳಾದಳು. ಅದನ್ನು ತನ್ನ ಕೋಣೆಯಲ್ಲಿ ಸ್ಥಾಪಿಸಿ ಹಗಲಿರುಳೆನ್ನದೆ ಕೀರ್ತನ, ಭಜನೆಗಳಲ್ಲಿ ತೊಡಗಿದಳು. ಈಕೆಯ ಈ ಭಕ್ತಿಯನ್ನು ನೋಡಿ ತಾತ ಸಂತುಷ್ಟನಾದ. ಕೃಷ್ಣನೇ ಈಕೆಯ ಆರಾಧ್ಯದೈವ. ಅವನನ್ನೇ ಆಕೆ ಪತಿಯೆಂದು ನಂಬಿದಳೂ. ತಾತನ ವೈಷ್ಣವ ಭಕ್ತಿ, ಧರ್ಮನಿಷ್ಠೆ, ಸಾಧುಸಂತರ ಗೋಷ್ಠಿ ಮೀರಾಬಾಯಿಯ ಈ ನಂಬಿಕೆಯನ್ನು ಮತ್ತಷ್ಟು ದೃಢಪಡಿಸಿತು. ಮೀರಾಬಾಯಿ ಗಿರಿಧರಗೋಪಾಲನ ದರ್ಶನಕ್ಕಾಗಿ ಹಾತೊರೆಯತೊಡಗಿದಳು.

ಸುಂದರಿಯೂ ಪ್ರಾಪ್ತವಯಸ್ಕಳೂ ಆದ ಅಕ್ಕ ಮಹಾದೇವಿಯನ್ನು ವರಿಸಲು ಭವಿಯಾದ ಕೌಶಿಕ ಮಹಾರಾಜ ತಾನೇ ಮುಂದೆ ಬಂದನು. ಮೊದಲಿನಿಂದಲೂ ಲಿಂಗವೇ ಪತಿ ಎಂದು ಭಾವಿಸಿ ಬೆಳೆದ ಅಕ್ಕಮಹಾದೇವಿ ಮದುವೆ ಒಪ್ಪಲಿಲ್ಲ. ಆಕೆಯ ಶಿವಭಕ್ತಿಯ ಆಳವನ್ನು ಅರಿತಿರಲಿಲ್ಲವೋ ಅಥವಾ ರಾಜಾಗ್ರಹಕ್ಕೆ ಗುರಿಯಾದೇವೆಂಬ ಭಯದಿಂದಲೋ ಆಕೆಯ ತಂದೆತಾಯಿಯೇ ಅವಳನ್ನು ಈ ಮದುವೆಗೆ ಬಲವಂತ ಮಾಡಿದರು. ಶಿವನಲ್ಲಿ ಅಚಲವಾದ ಭಕ್ತಿ, ನಂಭಿಕೆ ಇದ್ದ ಆಕೆಗೆ ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಳ್ಳುವ ಉಪಾಯ ತಿಳಿದಿತ್ತು. ನೊಂದ ತಂದೆತಾಯಿಯರ ರಕ್ಷಣೆ, ತನ್ನ ರಕ್ಷಣೆ ಎರಡನ್ನೂ ಈಕೆ ವಿಚಾರ ಮಾಡಿ, ಒಂದು ಒಪ್ಪಂದದ ಮೇರೆಗೆ ಕೌಶಿಕನನ್ನು ವರಿಸಿದಳು. ಕೌಶಿಕನು ಮೂರು ತಪ್ಪುಗಳನ್ನು ಮಾಡಿದ ಕೂಡಲೇ ತನ್ನ ಒಪ್ಪಂದದ ಪ್ರಕಾರ ಆತನನ್ನು ತ್ಯಜಿಸಿ, ತನ್ನ ಪ್ರಿಯತಮ, ಪತಿ ಚೆನ್ನಮಲ್ಲಿಕಾರ್ಜುನನನ್ನು ಹುಡುಕುತ್ತ, ಶ್ರೀಶೈಲದ ಕದಳಿಯಲ್ಲಿ ಅವನನ್ನು ಸಾಕ್ಷಾತ್ಕರಿಸಿಕೊಂಡು ಅವನಲ್ಲಿ ಐಕ್ಯವಾದಳು.

ಮೀರಾಬಾಯಿಯ ಜೀವನದಲ್ಲಿ ಇಂತಹ ಸಮಸ್ಯೆಯೇ ಬರಲಿಲ್ಲ. ಆಕೆಯ ಚಿಕ್ಕಪ್ಪ ಆಕೆಯೊಂದಿಗೆ ಏನನ್ನೂ ವಿಚಾರಿಸದೆ, ಕುಂವರ ಭೋಜರಾಜನೊಂದಿಗೆ ವೈಭವದಿಂದ ಮದುವೆ ಮಾಡಿದನು. ಮೀರಾ ತನ್ನ ಪೂಜಾವಿಗ್ರಹವಾದ ಶ್ರೀಕೃಷ್ಣ(ಗಿರಿಧರಲಾಲ)ನನ್ನು ಗಂಡನಮನೆಗೂ ಒಯ್ದು ಮೊದಲಿನಂತೆಯೇ ಪೂಜೆ ಭಜನೆಗಳನ್ನು ಮಾಡುತ್ತಿದ್ದಳು. ಇವಳ ದಾಂಪತ್ಯಜೀವನ ಸುಖಪೂರ್ಣವಾಗಿತ್ತು, ಚೆನ್ನಾಗಿತ್ತು. ಆದರೆ ಈ ಸುಖ ಬಹಳ ಕಾಲ ಉಳಿಯಲಿಲ್ಲ. ಬಹುಬೇಗನೇ ಭೋಜರಾಜ ಮೃತ್ಯುವಶನಾದನು. ಇದರಿಂದ ಆಕೆಯ ಜೀವನ ಕ್ರಮವೇ ಬದಲಾಗಿ, ಮನಸ್ಸು ಸಂಪೂರ್ಣವಾಗಿ ಗಿರಿಧರಲಾಲನನ್ನೇ ಲಗ್ನವಾಯಿತು. ಹಾಗಾಗಿ ಪತಿಯ ಮೃತ್ಯು ಸಂಭವಿಸಿದಾಗ

ರಜಪೂತ ಪದ್ಧತಿಯಂತೆ ಈಕೆ ಸಹಗಮನ ಮಾಡಲಿಲ್ಲ. ಅಕ್ಕಮಹಾದೇವಿಯಂತೆ ತಂದೆ ತಾಯಿಗಳ ಮಾತಿಗೆ ಒಪ್ಪಿ ಭವಿಯೊಬ್ಬನನ್ನು ತನ್ನ ಮನಸ್ಸಿಗೆ ವಿರುದ್ಧವಾಗಿ ಮದುವೆಯಾಗುವ ಧೈರ್ಯ ಮೀರಾಳಲ್ಲಿ ಇರದಿದ್ದರೂ, ಅಕ್ಕಮಹಾದೇವಿಯಂತೆಯೇ ತನ್ನ ಪತಿ ಪರಮಾತ್ಮನೇ ಎಂಬ ಭಾವನೆ ಈಕೆಯಲ್ಲೂ ಇದ್ದಿತು.

ಅಕ್ಕಮಹಾದೇವಿ ಮತ್ತು ಮೀರಾಬಾಯಿ ಇಬ್ಬರೂ ಅನುಬಾವಿಗಳಾದ್ದರಿಂದ ಇಬ್ಬರಲ್ಲೂ ಭಕ್ತಿಯಧಾರೆ ಸಮಾನವಾಗಿದೆ. ಇವರಿಬ್ಬರ ಆರಾಧ್ಯದೇವರು ಮಾತ್ರ ಬೇರೆ ಬೇರೆ ಅಷ್ಟೆ. ಚೆನ್ನಮಲ್ಲಿಕಾರ್ಜುನ ಅಕ್ಕ ಮಹಾದೇವಿಯ ಆರಾಧ್ಯದೇವರಾದರೆ ಗಿರಿಧರಲಾಲ ಮೀರಾಬಾಯಿಯ ಆರಾಧ್ಯದೈವ.

ಅಕ್ಕಮಹಾದೇವಿ ಚೆನ್ನಮಲ್ಲಿಕಾರ್ಜುನನೇ ತನ್ನ ಪತಿಯೆಂದು ಭಾವಿಸಿ ಬೆಳೆದು ಬಂದಿದ್ದರೂ, ಅನೇಕ ಕಷ್ಟಗಳನ್ನು ಅನುಭವಿಸಬೇಕಾಯಿತು. ಭವಿಯೊಡನೆ ಮದುವೆಯಾದಬೇಕಾಗಿ ಬಂದದ್ದು ಇವನ ಜೀವನದಲ್ಲಿ ಮೊದಲ ಕಷ್ಟ. ತನಗಾಗಿ ತಂದೆತಾಯಿಯರ ಪ್ರಾಣಕ್ಕೆ ಸಂಚಕಾರ ಬರುವುದು ಈಕೆಗೆ ಇಷ್ಟವಾಗಲಿಲ್ಲ. ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಳ್ಳುವ ಧೈರ್ಯ ಆಕೆಯಲ್ಲಿದ್ದುದರಿಂದ ಕೌಶಿಕನನ್ನು ಮದುವೆಯಾಗಿ ತಂದೆತಾಯಿಯರನ್ನು ಸಂಕಷ್ಟದಿಂದ ಪಾರುಮಾಡಿದಳು. ಕೌಶಿಕನನ್ನು ಮದುವೆಯಾಗಿ ಅರಮನೆಯಲ್ಲಿದ್ದಷ್ಟು ಸಮಯವೂ ಗುರುಲಿಂಗ ಜಂಗಮ ಪೂಜೆಯಲ್ಲಿ ಲೀನಳಾಗಿ, ಪಾರಮಾರ್ಥಿಕ ಸಾಧನೆಯನ್ನು ಮುಂದುವರಿಸಿದಳು. ಮೊದಲೇ ಮಾಡಿಕೊಂಡ ಒಪ್ಪಂದದಂತೆ ಕೌಶಿಕ ಮೂರು ತಪ್ಪುಗಳನ್ನು ಮಾಡಿದ ತಕ್ಷಣ ಸಂಸಾರ, ಅರಮನೆ, ಐಶ್ವರ್ಯ – ಎಲ್ಲ ರೀತಿಯ ಲೌಕಿಕ ಸುಖಗಳನ್ನು ಪರಿತ್ಯಾಗ ಮಾಡಿ ಅಲ್ಲಿಂದ ಹೊರಟಳು.

ಪತಿ, ಅರಮನೆ, ತಂದೆತಾಯಿ, ಬಂಧುಬಳಗ ಎಲ್ಲರನ್ನೂ ತ್ಯಜಿಸಿ ತನ್ನ ಸಾಧನಾ ಮಾರ್ಗದಲ್ಲಿ ಮುಂದುವರಿದಳು. ಶ್ರೀಶೈಲದಲ್ಲಿ ಐಕ್ಯಳಾಗಬೇಕೆಂಬುದೇ ಆಕೆಯ ಸಂಕಲ್ಪ. ಅಕ್ಕಮಹಾದೇವಿಯಲ್ಲಿ ಶಿವಭಕ್ತಿಯೊಡನೆ ಬಾಲ್ಯದಿಂದಲೇ ವೈರಾಗ್ಯವೂ ಬೆಳೆದು ಬಂದಿತ್ತು. ಈ ವೈರಾಗ್ಯದಲ್ಲೂ ಭಗವಂತನ ಬಗ್ಗೆ ಪ್ರೀತಿ–ಭಕ್ತಿಗಳನ್ನೇ ಪ್ರಕಟಪಡಿಸಿದ್ದಾಳೆ.

ಮನೆ ಮನೆ ತಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯ,
ಬೇಡಿದೊಡೆ ಇಕ್ಕದಂತೆ ಮಾಡಯ್ಯ,
ಇಕ್ಕಿದೊಡೆ ನೆಲಕ್ಕೆ ಬೀಳುವಂತೆ ಮಾಡಯ್ಯ,
ನೆಲಕ್ಕೆ ಬಿದ್ದೊಡೆ ನಾನೆತ್ತಿಕೊಂಬುದಕೆ ಮುನ್ನವೇ ಶನಿ ಎತ್ತಿಕೊಂಬಂತೆ
ಮಾಡಯ್ಯ, ಚೆನ್ನಮಲ್ಲಿಕಾರ್ಜುನ

ಈ ವಚನದಲ್ಲಿ ತನ್ನನ್ನು ನಿರ್ಲಿಪ್ತಳನ್ನಾಗಿ ಮಾಡು ಎಂದು ಕೇಳಿಕೊಳ್ಳುವ ದೈನ್ಯಭಾವ ವ್ಯಕ್ತವಾಗುತ್ತದೆ. ತನ್ನ ಸರ್ವಾಂಗವೂ ಚೆನ್ನಮಲ್ಲಿಕಾರ್ಜುನನಲ್ಲಿಯೇ ಲೀನವಾಗಿರಲಿ ಎಂಬ ಭಾವನೆ ಇದರಲ್ಲಿ ಎದ್ದು ಕಾಣುತ್ತದೆ. ಈಕೆ ದೇಹದ ವ್ಯಾಮೋಹವನ್ನೂ ಸಹ ತ್ಯಜಿಸಿದವಳು. ಇದು ಈಕೆಯ ವಿಶೇಷತೆ –

ಹಣ್ಣು ಮಿದ್ದ ಬಳಿಕ ಆ ಮರವನಾರು ತಂದರೇನು?
ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು?

ಭಗವಂತನ ಇಚ್ಛೆಗೆ ವಿರುದ್ಧವಾಗಿ ಮಾನವ ಏನೂ ಮಾಡಲು ಸಾಧ್ಯವಿಲ್ಲ. ಅದಕ್ಕಾಗಿ ಆಕೆ –

"ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯ" ಎಂಬ ಸತ್ಯವನ್ನು ತನ್ನ ವಚನದ ಮೂಲಕ ತೋರಿಸಿಕೊಟ್ಟಿದ್ದಾಳೆ. ಒಂದೆಡೆ ಆಕೆಯೇ ಹೇಳಿದ್ದಾಳೆ – "ಮನಸಿಜನ ತಲೆಯ ಬರಹವ ತೊಡೆದೆನು". ಇವಳಲ್ಲಿ ಮನಸಿಜನ ಆವಿರ್ಭಾವವೇ ಆಗಲಿಲ್ಲ. ಈಕೆಯ ಅಪೇಕ್ಷೆಯಲ್ಲಿ ಪರಾತ್ಪರನಾದ ಚೆನ್ನಮಲ್ಲಿಕಾರ್ಜುನನ ದರ್ಶನ, ಆತನಲ್ಲಿ ಐಕ್ಯಳಾಗಬೇಕೆಂಬುದು. ಅಲ್ಲದೆ ಸಾಮಾನ್ಯ ಕಾಮಪಿಪಾಸೆ ಈಕೆಯಲ್ಲಿ ಇರಲಿಲ್ಲ.

ಮೀರಾಬಾಯಿ ವಿವಾಹದ ನಂತರ ಸ್ವಲ್ಪ ಸಮಯ ತನ್ನ ಪತಿಯೊಡನೆ ಸುಖವಾಗಿ ಕಳೆದಳು. ಆದರೆ ಕೆಲಕಾಲದಲ್ಲಿಯೇ ಈ ಸುಖದಿಂದ ವಂಚಿತಳಾದ ಈಕೆಯ ಜೀವನಕ್ರಮವೇ ಬದಲಾಯಿತು. ಇವಳು ತನ್ನ ಆರಾಧ್ಯದೈವ ಗಿರಿಧರಲಾಲನನ್ನು ಆರಾಧಿಸಿ, ಭಜಿಸಿ, ಆತನೆದುರು ನರ್ತಿಸಿ, ಆತನನ್ನು ಒಲಿಸಿಕೊಳ್ಳಲು ಸರ್ವ ಪ್ರಯತ್ನ ಮಾಡಿದಳು.

ಪತಿಯ ಮೃತ್ಯುವಿನ ಮೊದಲೂ ತಾನು ತವರಿನಿಂದ ತಂದಿದ್ದ ಗಿರಿಧರಲಾಲನ ಮೂರ್ತಿಯನ್ನು ಪೂಜಿಸುತ್ತಿದ್ದಳು. ಆದರೆ ಈಗ ಪತಿಯ ಮರಣಾನಂತರ ಹೃತ್ಪೂರ್ವಕವಾಗಿ ಗಿರಿಧರನ ಪೂಜೆಯಲ್ಲೇ ತಲ್ಲೀನಳಾದಳು. ಗಿರಿಧರನಲ್ಲಿ ಈಕೆಗಿದ್ದ ಅನುರಾಗದಿಂದಾಗಿಯೇ ಈಕೆ ಗಿರಿಧರನ ಕಡೆಗೆ ಅಷ್ಟು ಆಕರ್ಷಿತಳಾಗಿದ್ದಳು. ಚಿಕ್ಕವಯಸ್ಸಿನ ವಿಧವೆ ಮೀರಾ ಸಾಧುಸಂತರೊಡನೆ ಚರ್ಚೆ ಮಾಡುವುದು ಆ ಕಾಲಕ್ಕೆ ಕಲ್ಪನಾತೀತವಾಗಿತ್ತು. ಅಷ್ಟೇ ಅಲ್ಲ, ಗಿರಿಧರಲಾಲನ ಎದುರು ಭಜನೆ ಮಾಡುತ್ತ ನರ್ತಿಸುವುದನ್ನಂತೂ ಸಹಿಸದಾದರು. ಈಕೆಯನ್ನು ಕೊಲ್ಲಿಸಲೆಂದೇ ವಿಷದ ಬಟ್ಟಲನ್ನೂ, ಹಾವಿನ ಬುಟ್ಟಿಯನ್ನೂ ಮುಳ್ಳಿನ ಹಾಸಿಗೆಯನ್ನೂ ಕಳುಹಿಸಲಾಯಿತು. ಆದರೆ ಈಕೆಯ

ವೃಂದಾವನದಲ್ಲಿ ಆತನಿಗೊಬ್ಬ ಪ್ರತಿಸ್ಪರ್ಧಿ ಇದ್ದಾನೆಂದು ಈಗ ಗೊತ್ತಾಯಿತು. ತಾವು ಜಗತ್ತಿಗೆ ಮಧುರ ಭಕ್ತಿಯ ಉಪದೇಶ ಮಾಡುತ್ತಿದ್ದೀರಿ. ಆದರೆ ಪುರುಷನೆಂಬ ಅಭಿಮಾನ ತುಂಬಿ ತುಳುಕುತ್ತಿದೆ. ನಾರಿಯ ಮುಖ ನೋಡುವುದು ಪಾಪವೆಂದು ತಿಳಿದಿದ್ದೀರಿ. ಇದು ನಿಮ್ಮ ರಾಧಾ ಪೂಜೆಯೇ? ಇದೇ ನಿಮ್ಮ ಮಧುರ ಭಕ್ತಿಯೇ?" ಜೀವಗೋಸ್ವಾಮಿಗಳು ಆಗಿನ ಕಾಲದ ಪ್ರಸಿದ್ಧ ಸಂತರು. ಪಶ್ಚಿಮೋತ್ತರ ಭಾರತದಲ್ಲಿ ಚೈತನ್ಯ ಸಂಪ್ರದಾಯದ ಶ್ರೇಷ್ಠ ಪ್ರಚಾರಕರು. ಮೀರಾಬಾಯಿಯ ಈ ಉತ್ತರ ಕೇಳುತ್ತಲೇ ತಮ್ಮ ಜ್ಞಾನ, ವೈರಾಗ್ಯ ಎಲ್ಲವನ್ನೂ ಮರೆತು ಬರಿಗಾಲಿನಿಂದ ಓಡಿ ಬಂದು ಮೀರಾಬಾಯಿಯ ದರ್ಶನ ಪಡೆದರು.

ಹಾಗೆಯೇ ಅನುಭವ ಮಂಟಪದ ಬಾಗಿಲಿಗೆ ಬಂದು ನಿಂತ ಅಕ್ಕಮಹಾದೇವಿಗೆ, ಅಲ್ಲಮಪ್ರಭು –

ಸತಿ ನೀನು ಇತ್ತಲೇಕೆ ಬಂದೆಯವ್ವಾ?
ಸತಿಯೆಂದರೆ ಮುನಿವರು ನಮ್ಮ ಶರಣರು
ನಿನ್ನ ಪತಿಯ ಕುರುಹು ಹೇಳಿದರೆ ಬಂದು ಕುಳ್ಳಿರು
ಇಲ್ಲದಿದ್ದರೆ ತೊಲಗು ತಾಯೆ

ಎಂದು ಆಜ್ಞೆ ಮಾಡಿದಾಗ ಅಕ್ಕಮಹಾದೇವಿಯು –

ಹರನೇ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ
ತಪಿಸಿದ್ದೆ ನೋಡಾ

ಎಂದು ತನ್ನ ಗಂಡನ ಕುರುಹು ಹೇಳಲು ಮುಂದಾಗಿದ್ದಾಳೆ. ಆದರೆ ಪ್ರಭುದೇವರು –"ಕೇಶವೆಂಬ ಸೀರೆಯು ಲಿಂಗಕ್ಕೆ ಮರೆಯಾಯಿತ್ತು. ಅಪಮಾನವೆಂತು ಹರಿಯಿತ್ತು?" ಎಂದು ಕೇಳಿದರೆ, ಅಕ್ಕ ಮಹಾದೇವಿ ಹೀಗೆ ಹೇಳುತ್ತಾಳೆ –

ಕಾಯ ಕರ್ರನೆ ಕಂದಿದರೇನಯ್ಯ,
ಕಾಯ ಕರ್ರನೆ ಮಿಂಚಿದರೇನಯ್ಯ,
ಅಂತರಂಗ ಶುದ್ಧವಾದ ಬಳಿಕ ಚೆನ್ನಮಲ್ಲಿಕಾರ್ಜುನ
ಲಿಂಗವು ಒಲಿದ ಕಾಯ ಹೇಗಿದ್ದರೇನಯ್ಯ

ಆಗ ಅಲ್ಲಮಪ್ರಭು ಪುನಃ ಹೀಗೆ ಪ್ರಶ್ನೆ ಮಾಡುತ್ತಾರೆ – "ಭಾವ ಶುದ್ಧವಾದಲ್ಲಿ ಸೀರೆಯನುಳಿದು ಕೂದಲು ಮರೆಮಾಡುವುದೇತಕ್ಕೆ?" ಅದಕ್ಕೆ ಅಕ್ಕಮಹಾದೇವಿ ನೀಡಿದ ಉತ್ತರ

ಅನುಭವ ಮಂಟಪದ ಶರಣರನ್ನು ನಿರುತ್ತರಗೊಳಿಸಿದೆ. ಆಕೆ – "ಕಾಮನ ಮುದ್ರೆಯ ಕಂಡು ನಿಮಗೆ ನೋವಾದೀತೆಂದು ಆ ಭಾವದಿಂದ ನಿರ್ಜೀವವಾಯಿತ್ತು. ಭಾವದೊಳಗೆ ನಿರ್ಭಾವವಾಗಿತ್ತು" ಎಂದು ಉತ್ತರಿಸಿ – "ಆತ್ಮಕ್ಕೆ ಅಂಗಕ್ಕೆ ಭೇದವಿಲ್ಲ. ದೇವರ ಬೆರಸಿ ಮತಿಗೆಟ್ಟವಳನೇಕೆ ನುಡಿಸುವಿರಿ? ಶರಣ ಸತಿ ಲಿಂಗಪತಿಯಾದೆನು" ಎಂದು ಹೇಳಿದಾಗ ಶರಣರು ತಲೆಬಾಗಿದರು.

ಈ ರೀತಿ ಅಕ್ಕಮಹಾದೇವಿ ಮತ್ತು ಮೀರಾಬಾಯಿ ನಾರಿಯ ಸಬಲ ರೂಪಧರಿಸಿ ನಮ್ಮ ಮುಂದೆ ನಿಂತಿದ್ದಾರೆ. ಅದರಿಂದ ಸ್ತ್ರೀತ್ವಕ್ಕೆ ಮಾದರಿಯಾಗಿದ್ದಾರೆ. ತಮ್ಮ ಗೌರವವನ್ನು ಹೆಚ್ಚಿಸಿಕೊಂಡಿದ್ದಾರೆ. ಹೆಣ್ಣನ್ನು ದುರ್ಬಲರು ಎಂಬ ಪೂರ್ವಕಲ್ಪನೆಯನ್ನು ನಿರಾಕರಿಸಿ ಶಕ್ತಿಯ ಸಬಲರೂಪದ ದರ್ಶನ ಮಾಡಿಕೊಟ್ಟಿದ್ದಾರೆ. ಈ ಶರೀರ ಕರ್ರನೆ ಕಂದಿದರೇನು, ಮಿರ್ರನೆ ಮಿಂಚಿದರೇನು. ಅವರಿಗೆ ಚಿಂತೆಯಿಲ್ಲ. ಶೀಲ ವ್ರತಗಳೇ ಅವರ ಅಲಂಕಾರಗಳು. ಮೀರಾಬಾಯಿ ಹೇಳಿದಂತೆ -

ಝೂಠಾ ಮಾಣಿಕ ಮೋತಿಯಾರೀ
ಝೂಠೀ ಜಗಮಗ ಜ್ಯೋತಿ
ಝೂಠೀ ಸಬ ಆಭೂಷಣರೀ–
ಸಾಂಜೀ ಪಿಯಾಜಿ ರೀ ಪ್ರೀತಿ ಭಾವಭಗತ್ ಭೂಷಣ ನ್ಯೆ
ಶೀಲೋ ಸಂತೋ ಸಿಂಗಾರ ಓಢೀ ಚೂನರ ಪ್ರೇಮಕೀ ಗಿರಿಧರಜೀ ಭವತಾರ

ಮುತ್ತು-ರತ್ನ ಆಭರಣಗಳೆಲ್ಲ ಮಿಥ್ಯ. ಭಗವಂತನ ಪ್ರೀತಿಯೊಂದೇ ಸತ್ಯ. ಭಾವಭಕ್ತಿಯೇ ಭೂಷಣ, ಶೀಲವೇ ಶೃಂಗಾರ. ಅಕ್ಕಮಹಾದೇವಿ ಸಹ – "ಮಂಗಳವೇ ಮಜ್ಜನ, ವಿಭೂತಿಯೇ ಅರಿಷಿಣ, ದಿಗಂಬರವೇ ದಿವ್ಯಾಂಬರ, ರುದ್ರಾಕ್ಷಿಯೇ ಮೈದೊಡಿಗೆ, ಶರಣಪಾದಗಳೇ ತೊಂಡಿನ ಬಾಸಿಗವೆನಗೆ. ಚೆನ್ನಮಲ್ಲಿಕಾರ್ಜುನನೇ ಗಂಡ – ಎನಗೆ ಬೇರೆ ಶೃಂಗಾರವೇಕೆ ಹೇಳಿರವ್ವಾ" ಎಂದು ಕೇಳಿದ್ದಾಳೆ.

ಮೀರಾಬಾಯಿ ಹಾಗೂ ಅಕ್ಕಮಹಾದೇವಿಯ ಈ ಸಬಲ ವ್ಯಕ್ತಿತ್ವದ ಪರಿಚಯ ವೃಂದಾವನದ ಸಂತರಿಗೆ ಹಾಗೂ ಕಲ್ಯಾಣದ ಶರಣರಿಗೆ ಆಗಿದೆ. ವೃಂದಾವನದಲ್ಲಿ ಅನೇಕ ವಿದ್ವಾಂಸ ಗೋಸ್ವಾಮಿಗಳೂ, ಸಂತರೂ ಇದ್ದರೂ ಸಹ ದೇವಿತ್ವದ ಪಟ್ಟ ಮೀರಾಳಿಗೆ ಸಿಕ್ಕಿದೆ. ದ್ವಾಪರಯುಗದ ವ್ರಜಗೋಪಿಯ ಪ್ರೇಮದ ಉಚ್ಚ ಆದರ್ಶವನ್ನು ಸ್ಥಾಪಿಸಿದ್ದಕ್ಕಾಗಿ ಮೀರಾಬಾಯಿ ಗೋಪಿಯ ಅವತಾರವೆಂದು ಪೂಜ್ಯಳಾಗಿದ್ದಾಳೆ.

ಅನುಭವಮಂಟಪದ ಪರೀಕ್ಷೆಯಿಂದ ಅಕ್ಕಮಹಾದೇವಿ ಯಶಸ್ವಿಯಾಗಿ ಹೊರಬಂದಾಗ ಶರಣರೆಲ್ಲ ಆಕೆಯನ್ನು 'ಅಕ್ಕ' ಎಂದು ಒಕ್ಕೊರಲಿನಿಂದ ಕರೆದಿದ್ದಾರೆ. ಮಹಾದೇವಿ, ಅಕ್ಕಮಹಾದೇವಿಯಾದಳು. ಅಕ್ಕನೆಂದರೆ ಹಿರಿಯಳು, ಚೆನ್ನಬಸವಣ್ಣ ಮಹಾದೇವಿಗೆ ಹಿರಿತನದ ಪಟ್ಟವನ್ನೇ ಕಟ್ಟಿದರು. –"ಅನುವರಿತು ಘನವ ಬೆರಿಸಿ ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಸಂಗಯ್ಯನಲ್ಲಿ ಬೆರಸಿ, ಬೇರಿಲ್ಲದ ಹಿರಿತನ ನಮ್ಮ ಅಕ್ಕ ಮಹಾದೇವಿಯಕ್ಕಂಗಾಯಿತ್ತ" ಎಂದು ಹೊಗಳಿದ್ದಾರೆ. 'ಕಾಲದ ಕಿರಿಯತನದಲ್ಲಿ ಕಾಮವ ಸುಟ್ಟ ಮಹಾದೇವಿಯಕ್ಕನ ಹಿರಿಯತನ ನೋಡಾ' ಎಂದು ಪ್ರಭುದೇವರು ಪ್ರಶಂಸಿಸಿದರೆ ಬಸವಣ್ಣನವರು ಮಹಾದೇವಿಯನ್ನು ಮುತ್ತಾಂಗನೆ, ಸತ್ಯದ ಸದನ, ಸ್ವಾನುಭಾವದ ಸಾಗರ, ಶಿವಾನಿಭವ ಸಂಪನ್ನೆ, ಎನ್ನ ಹೆತ್ತ ತಾಯಿ ಎಂದಿದ್ದಾರೆ. ಈ ರೀತಿ ಆಕೆಯ ಹಿರಿಯ ವ್ಯಕ್ತಿತ್ವವನ್ನು ಕಂಡು ಶರಣರು ಚಕಿತರಾಗಿದ್ದಾರೆ. ಆಕೆಯನ್ನು ಗೌರವಿಸಿ ತಮ್ಮನ್ನು ತಾವು ಗೌರವಿಸಿಕೊಂಡಿದ್ದಾರೆ.

ಅನುಭಾವಿಗಳೆಲ್ಲರಿಗೂ 'ಸತಿ–ಪತಿ ಭಾವ'ದ ಅನುಷ್ಠಾನ ಸಹಜ ಹಾಗೂ ಆತ್ಮಾಭಿವ್ಯಕ್ತಿಗೆ ಸುಲಭಮಾರ್ಗ ಇಲ್ಲಿರುವುದು ದೈಹಿಕ ರತಿಯಲ್ಲ; ಆತ್ಮರತಿ. ಈ ಭಾವನೆ ಅಕ್ಕಮಹಾದೇವಿ ಮತ್ತು ಮೀರಾಬಾಯಿ ಇಬ್ಬರಲ್ಲೂ ಇದೆ.

ಅಕ್ಕಮಹಾದೇವಿಯಲ್ಲಂತೂ ಈ ಸತಿ–ಪತಿಭಾವ ತಾನೇ ತಾನಾಗಿ ಹೊರಹೊಮ್ಮಿದೆ. ಇವಳು 'ನುಡಿದುದೆಲ್ಲ ಶಿವತತ್ವ, ನಡೆದುದೆಲ್ಲ ಶಿವಮಾರ್ಗ'. ಬಾಲ್ಯದಿಂದಲೂ ಚೆನ್ನಮಲ್ಲಿಕಾರ್ಜುನನೇ ಪತಿಯಾಗಬೇಕೆಂದು ಆಶಿಸಿ, ಪ್ರೌಢಳಾದ ನಂತರವೂ ಅದೇ ಭಾವನೆ ಹೆಚ್ಚಾಗಿ ಕೌಶಿಕನ ಪ್ರಸಂಗದಿಂದ ಅದು ಬೆಳಕಿಗೆ ಬರಲು ಅವಕಾಶವಾಯಿತು. ಕೌಶಿಕನನ್ನು ತೊರೆದ ಆಕೆ ಕಲ್ಯಾಣಕ್ಕೆ ಬಂದು ಬಸವಣ್ಣ ಮೊದಲಾದ ಶರಣರ ಭೇಟಿಯ ನಂತರ ತನ್ನ ಅಲೌಕಿಕ ಪತಿಯನ್ನು ಹುಡುಕುತ್ತ ಶ್ರೀಶೈಲಕ್ಕೆ ತೆರಳುತ್ತಾಳೆ.

ಅಕ್ಕಮಹಾದೇವಿ 'ಸತಿಗೆ ಪತಿಯೇ ದೇವರೆಂಬ' ಹೇಳಿಕೆಯನ್ನು ಅರ್ಥೈಸಿಕೊಂಡು ಪ್ರಪಂಚಕ್ಕೆ ತಿಳಿಸಿದವಳು. ಲೋಕದ ಜೀವಾತ್ಮರೇ ಸತಿ. ಈ ಸತಿಗಳಿಗೆ ಪರಮಾತ್ಮನೇ ಪತಿ, ಒಡೆಯ, ಯಜಮಾನ ಎಂಬುದು ಈಕೆಯ ತತ್ವ, ಅದನ್ನೇ ಈಕೆ ತನ್ನ ವಚನಗಳಲ್ಲಿ ಹಾಡಿದ್ದಾಳೆ – 'ಇಹಕ್ಕೊಬ್ಬ ಗಂಡನೆ? ಪರಕ್ಕೊಬ್ಬ ಗಂಡನೆ? ಎನ್ನ ಗಂಡ ಚೆನ್ನಮಲ್ಲಿಕಾರ್ಜುನ ದೇವರಲ್ಲೆ ಮಿಕ್ಕಿನ ಗಂಡರೆಲ್ಲ ಮುಗಿಲ ಮರೆಯ ಬಣ್ಣದ ಬೊಂಬೆಗಳು.' ಆ ಕಾಲದಲ್ಲಿ, ಸ್ತ್ರೀಯರಿಗೆ ಸ್ವಲ್ಪವೂ ಸ್ವಾತಂತ್ರ್ಯವಿಲ್ಲದ ಕಾಲದಲ್ಲಿ, ಪತಿಯೇ ಪರದೈವವೆಂದು ತಿಳಿದ ಸತಿಯನ್ನು ಅತ್ಯಂತ ಕೀಳಾಗಿ ನಡೆಸುತ್ತಿದ್ದ ಕಾಲದಲ್ಲಿ, ಸ್ತ್ರೀ ಕೇವಲ ಭೋಗದ ವಸ್ತುವಲ್ಲ, ಆಕೆಗೂ ಆತ್ಮವಿದೆ, ತನ್ನ ಮನಸ್ಸಿನ

ಆಸೆಯನ್ನು ಬಿಚ್ಚಿಹೇಳುವ ಸ್ವಾತಂತ್ರ್ಯ ಆಕೆಗೂ ಇದೆ ಎಂಬುದನ್ನು ತಿಳಿಸಿಕೊಟ್ಟವಳು ಅಕ್ಕಮಹಾದೇವಿ. "ಕಾಣುತ್ತ ಕಾಣುತ್ತ ಕಂಗಳ ಮುಚ್ಚಿದೆ ನೋಡವ್ವ; ಕೇಳುತ್ತ ಕೇಳುತ್ತ ಮೈಮರೆದೆರಗಿದೆ ನೋಡವ್ವ; ಹಾಸಿದ ಹಾಸಿಗೆಯ ಹಂಗಿಲ್ಲದೆ ಹೋಯಿತ್ತು ಕೇಳವ್ವ; ಚೆನ್ನಮಲ್ಲಿಕಾರ್ಜುನ ದೇವರನು ಕೂಡುವ ಕೂಟವ ನಾನೇನೆಂದರಿಯದೆ ಮರೆದೆ ಕಾಣವ್ವ" ಎಂದು ಹಾಡಿರುವುದರಿಂದ ಈಕೆಗೆ ಚೆನ್ನಮಲ್ಲಿಕಾರ್ಜುನನ ಸಾಕ್ಷಾತ್ಕಾರ ಯಾವುದೋ ಒಂದು ಗಳಿಗೆಯಲ್ಲಿ ಆಗಿತ್ತೆಂದು ತಿಳಿದುಬರುತ್ತದೆ. ಹಾಗಾಗಿ ಇನ್ನೊಂದು ವಚನದಲ್ಲಿ ಈ ರೀತಿ ಹಾಡಿದ್ದಾಳೆ – "ಲೇಸು ಹಾಸು, ನೋಟವಾಭರಣ, ಆಲಿಂಗನ ವಸ್ತ್ರ, ಚುಂಬನವಾರೋಗಣೆ, ಲಲ್ಲೆಮಾತು ತಾಂಬೂಲ, ಲವಲವಿಕೆಯೇ ಅನುಲೇಪನವೆನಗೆ, ಚೆನ್ನಮಲ್ಲಿಕಾರ್ಜುನನ ಕೂಟ ಪರಮ ಸುಖವವ್ವಾ" ಎಂದು ಚೆನ್ನಮಲ್ಲಿಕಾರ್ಜುನನಲ್ಲಿ ಸೇರಿದ ಅಕ್ಕಮಹಾದೇವಿ, "ಭವಗೆದ್ದು ಬಂದು ಮಗಳೆಂದು ಕರುಣದಿಂದ ತೆಗೆದು ಬಿಗಿಯಪ್ಪಿದರೆ, ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು." ಎಂದಿದ್ದಾಳೆ. ತಾನು ಬೇರೆ, ಲಿಂಗ ಬೇರೆ ಎಂಬ ದ್ವೈತ ಭಾವ ಆಗ ನಶಿಸಿ, ಲಿಂಗವೇ ತಾನು, ತಾನೇ ಲಿಂಗ ಎಂಬ ಅದ್ವೈತ ಭಾವ ನೆಲಸುತ್ತದೆ. "ಲಿಂಗವೆನ್ನೆ, ಲಿಂಗೈಕ್ಯವೆನ್ನೆ, ಸಂಗವೆನ್ನೆ, ನಿಸ್ಸಂಗವೆನ್ನೆ, ಆಯಿತೆನ್ನೆ – ಆಗದೆನ್ನೆ, ನೀನೆನ್ನೆ, ನಾನೆನ್ನೆ; ಚೆನ್ನಮಲ್ಲಿಕಾರ್ಜುನ ಲಿಂಗದಲ್ಲಿ ಲಿಂಗೈಕ್ಯವಾದ ಬಳಿಕ, ಮತ್ತೇನೂ ಎನಲೊಲ್ಲದೆ ಇದ್ದೆನು?" ಈ ರೀತಿ ಒಂದು ಜೀವಾತ್ಮ, ಭೂಮಿಯಲ್ಲಿ ಹುಟ್ಟಿ, ತನಗೆ ವಿಧಿಸಿದ ಕೆಲಸವನ್ನು ನಿರ್ವಹಿಸಿ, ಮತ್ತೆ ಪರಮಾತ್ಮನಲ್ಲಿ ಐಕ್ಯವಾಯಿತು.

ಮೀರಾಬಾಯಿಯ ಜೀವನದಲ್ಲೂ ಸತಿ–ಪತಿ ಭಾವ ಒಡಬೆರೆದಿದೆ. ಅಕ್ಕಮಹಾದೇವಿ ಭವಿಯೊಡನೆ ಮದುವೆ ಬೇಡವೆಂದು ಮೊದಲು ನಿರಾಕರಿಸಿದರೂ ತನ್ನಿಂದಾಗಿ ತಂದೆತಾಯಿಗಳಿಗೆ ಪ್ರಾಣಾಪಾಯ ಉಂಟಾಗುತ್ತದೆಂಬ ಹೆದರಿಕೆಯಿಂದಲೂ, ತನ್ನ ಶಿವಪಾತಿವ್ರತ್ಯವನ್ನು ಕಾಪಾಡಿ ಕೊಳ್ಳಬಲ್ಲೆನೆಂಬ ವಿಶ್ವಾಸದಿಂದಲೂ ಭವಿಯೊಡನೆ ಒಪ್ಪಂದ ಮಾಡಿಕೊಂಡು ಮದುವೆಯಾಗಿ, ಮಾತು ಮುರಿದೊಡನೆ ಎಲ್ಲವನ್ನೂ – ಎಲ್ಲರನ್ನು ತ್ಯಜಿಸಿ ತನ್ನ ಅಲೌಕಿಕ ಪತಿಯನ್ನು ಹುಡುಕುತ್ತ ಹೊರಟವಳು. ಆದರೆ ಮೀರಾಳಲ್ಲಿ ಇದಾವುದರ ಗೊಂದಲವೂ ಇಲ್ಲ. ಭೋಜರಾಜನೊಡನೆ ವಿವಾಹವಾಗಿ, ಸುಖ ಸಂಸಾರದಲ್ಲಿದ್ದು, ಪತಿಯ ಮೃತ್ಯುವಿನ ನಂತರ ಗಿರಿಧರನಲ್ಲೇ ಮನಸ್ಸನ್ನು ಲೀನಗೊಳಿಸಿದಳು. ಗಿರಿಧರನಲ್ಲಿ ಬಾಲ್ಯದಿಂದಲೂ ಈಕೆಗೆ ಪ್ರೀತಿಯಿದ್ದರೂ, ಅದು ಬೆಳಕಿಗೆ ಬಂದದ್ದು ಪತಿಯ ದೇಹಾವಸಾನದ ನಂತರ. ಆಗಲೂ ವಿಧವೆ ಸುಂದರಿ ಮೀರಾ ಸಾಕಷ್ಟು ಕಷ್ಟಪಟ್ಟು, ಕೊನೆಗೆ ಯಾರ ಹಂಗೂ ಬೇಡವೆಂದು ಗಿರಿಧರನ ಕ್ರೀಡಾಸ್ಥಳವೆಂದು ಪ್ರಸಿದ್ಧವಾದ ಬೃಂದಾವನಕ್ಕೆ ಬಂದಾಗಲೇ ಈಕೆಯ ಸತಿ–ಪತಿ ಭಾವ ಪ್ರಕಟಗೊಂಡದ್ದು.

ಮೀರಾಬಾಯಿಯ ಪದಗಳಲ್ಲಿ ನಿರಂತರವಾಗಿ ಬರುವ 'ಪೂರ್ವ ಜನಮು ಕೀ ಪ್ರೀತ ಪುರಾಣೀ', 'ಮೇರಿ ಉಣಕೀ ಪ್ರೀತ ಪುರಾಣೀ', 'ಜನುಮ ಜನುಮ ಕೀ ದಾಸೀ ರೇ' ಈ ಪದಗಳೆಲ್ಲ ಆಕೆಯ ಸತಿ-ಪತಿ ಭಾವವನ್ನು ದೃಢಪಡಿಸುತ್ತದೆ. 'ಮರಣ ಜೀವಣ ಉನಹಾಥ' ಎಂದು ಬಣ್ಣಿಸಿ ಜೀವಾತ್ಮನ ಅನನ್ಯ ಶರಣ ಭಾವವನ್ನು ವ್ಯಕ್ತಪಡಿಸುತ್ತದೆ. ಈಕೆಗೆ ಜೀವಂತವಾಗಿರುವಾಗ ಮಾತ್ರ ಭಗವಂತನ ಸಾನ್ನಿಧ್ಯ ಬೇಕೆಂದಿಲ್ಲ; ಸತ್ತ ಮೇಲೂ ತನ್ನ ಚಿತೆಯ ಬೂದಿಯನ್ನು ಅವನು ಲೇಪಿಸಿಕೊಳ್ಳಲಿ, 'ಅದರಿಂದ ನಾನು ಸಂತುಷ್ಟಳಾಗುವೆನು, ನನ್ನ ಚಿತೆಗೆ ಆತನೇ ಅಗ್ನಿಸ್ಪರ್ಶ ಮಾಡಲಿ' ಎಂದು ಬಯಸಿದ್ದಾಳೆ. ಆದರೆ ಚಿತೆಗೆ ಚಂದನದ ಕಾಷ್ಠವೇ ಆಗಲಿ. ಬೇರೆ ಕಾಷ್ಠವಾದರೆ ಪ್ರಿಯತಮನಿಗೆ ಕಣ್ಣುನೋವು-ತಲೆನೋವು ಬರಬಹುದು ಎಂಬ ಭಾವ ವಿನೂತನವಾದುದು.

ಕಲ್ಯಾಣವು ಅಕ್ಕಮಹಾದೇವಿಗೆ ಅರಿವಿನ ನೆಲೆಯಾದರೆ ವೃಂದಾವನವು ಮೀರಾಬಾಯಿಗೆ ಸಾಧನಾರಂಗವಾಗಿದೆ. ಇವರಿಬ್ಬರ ನಿಜವಾದ ಗುರು ಯಾರೆಂಬುದು ನಿಶ್ಚಿತವಾಗಿ ಗೊತ್ತಾಗುವುದಿಲ್ಲ. ಮೀರಾಬಾಯಿ ಸಂತ ರೈದಾಸರ ಹೆಸರನ್ನು ಹೇಳಿಕೊಳ್ಳುವುದರಿಂದ ಅವರೇ ಆಕೆಯ ಗುರುಗಳಾಗಿರಬೇಕೆಂಬುದು ಅನೇಕರ ವಾದ. ಅಂತೆಯೇ ಬಸವಣ್ಣ ಅಕ್ಕಮಹಾದೇವಿಯ ಗುರುವೆಂದು ಆಕೆಯ ವಚನಗಳಿಂದ ಕಲ್ಪಿಸಬಹುದು. ಆದರೆ ಇವರಾರೂ ಅವರ ದೀಕ್ಷಾಗುರುಗಳಾಗಿರಲಿಲ್ಲ. ಮೀರಾಬಾಯಿ ಮತ್ತು ಅಕ್ಕಮಹಾದೇವಿ ಇಬ್ಬರೂ ಸಾಧುಗಳನ್ನೂ, ಸಂತರನ್ನೂ, ಶರಣರನ್ನೂ ಆದರದಿಂದ, ಗೌರವದಿಂದ ನೋಡಿದ್ದಾರೆ. ಅವರೆಲ್ಲರಿಂದಲೂ ಇವರು ಅನೇಕ ಸಂದೇಶಗಳನ್ನು ಕಲಿತಿದ್ದಾರೆ. ಸಂತ ಹಾಗೂ ಶರಣ ಸಮುದಾಯವೇ ಅವರಿಗೆ ಗುರು. ತಮ್ಮ ಆರಾಧ್ಯದೇವರ ದಾರಿಯನ್ನು ತೋರಿಸುವವರೆಲ್ಲರೂ ಅವರಿಗೆ ಗುರುಗಳೇ. ಹಾಗಾಗಿ ಗುರುಗಳ ಬಗ್ಗೆ ಬಾಕಿ ಭಕ್ತರಿಗಿರುವಂತೆ ಇವರಿಗೂ ಅಪಾರವಾದ ಗೌರವವಿದೆ. "ಹುಟ್ಟಿದೆನು ಗುರುವಿನ ಹಸ್ತದಲ್ಲಿ" ಎಂದು ಹೇಲಿ ಅಕ್ಕಮಹಾದೇವಿ "ಗುರು ನರಜನ್ಮ ತೊಡೆದು ಹರಜನ್ಮ ಮಾಡಿದೆನೆಂದು" ಹೇಳುತ್ತಾಳೆ. ಗುರುಗಳ ಕಾರುಣ್ಯದಿಂದ ಲಿಂಗ ಜಂಗಮರನ್ನು ಕಂಡಿದ್ದಾಳೆ. ಗುರುವೇ ಆಕೆಗೆ ಚೆನ್ನಮಲ್ಲಕಾರ್ಜುನನನ್ನು ತೋರಿಸಿದ್ದಾರೆ. ಭವಬಂಧನವ ಬಿಡಿಸಿ ಪರಮಸುಖವನ್ನು ತೋರಿದ ಆ ಗುರುವಿಗೆ ಆಕೆ ಋಣಿಯಾಗಿದ್ದಾಳೆ. ಮೀರಾ ಹೇಳುವಂತೆ –

ಸತಕೀ ನಾವ ಖೇವಟಿಯಾ ಸತ ಗುರು ಭವಸಾಗರ ತರಿ ಆಯೆ.

ಅದೇ ಗುರುವೇ ಮೀರಾಬಾಯಿಯನ್ನು ಭವಸಾಗರವನ್ನು ದಾಟಿಸಲು ಅಂಬಿಗನಾಗಿ ಬಂದಿದ್ದಾನೆ.

ಗುರುವೇ ಇವರಿಬ್ಬರಿಗೂ ಅಮೂಲ್ಯವಾದ ಮಂತ್ರವನ್ನು ಕರುಣಿಸಿದ್ದಾನೆ. ರಾಮನಾಮವೆಂಬ ಅಮೂಲ್ಯ ಮಂತ್ರವನ್ನು ಮೀರಾಳಿಗೆ ದಯಪಾಲಿಸಿದರೆ, ಅದೇ ಗುರು ಅಕ್ಕಮಹಾದೇವಿಗೆ ಶಿವಮಂತ್ರವನ್ನು ಕರುಣಿಸಿದ್ದಾನೆ. ಮಂತ್ರವನ್ನು ಪಡೆದ ಮೀರಾ ಸಂತೋಷದಿಂದ ಈ ಕೆಳಗಿನಂತೆ ಹಾಡಿದ್ದಾಳೆ –

ರಾಮ ರತನ ಧನ ಪಾಯೋ
ವಸ್ತು ಆ ಮೋಲಕ ದೀ ಮೇರೆ ಸತಗುರು

ನನಗೆ ರಾಮನೆಂಬ ರತ್ನ, ಧನ ಲಭಿಸಿದೆ. ನನ್ನ ಸದ್ಗುರು ನನಗೆ ಅಮೂಲ್ಯವಾದ ವಸ್ತುವನ್ನು ನೀಡಿದ್ದಾರೆ. ಅಕ್ಕಮಹಾದೇವಿ ಸಹ ಗುರುವು ನೀಡಿದ ಮಂತ್ರಕ್ಕಾಗಿ ಅವರನ್ನು ಅಭಿನಂದಿಸುತ್ತ ತನ್ನ ಮನಸ್ಸಿಗೆ ತಿಳಿಹೇಳಿದ್ದಾಳೆ –

ಚಿತ್ತ ವ್ಯಾಕುಲನಾಗಿ ಭ್ರಮಿಸದಿರು ಎಲೆ ಮನವೆ
'ಶಿವಶಿವಾ' ಎಂದರೆ ಸಾಲದೆ?
ಎನಗಿದೆ ಮಂತ್ರ ಎನಗಿದೆ ತಂತ್ರ
ಎನಗಿದೇ ಗತಿ ಮತಿ ಸದ್ಗುರು
ಚೆನ್ನಮಲ್ಲಿಕಾರ್ಜುನನ ತೋರಿದ ಎನಗಿದೇ ಸಹಜ ಯಾತ್ರೆ

## ಆಕರ ಸೂಚಿ

೧. **ಡಾ. ತಿಪ್ಪೇಸ್ವಾಮಿ, ೧೯೯೮**

ಶರಣರು ಮತ್ತು ಸಂತರು, ಪ್ರ. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು.

೨. **ಡಾ. ಬಿ. ಎಸ್. ಸುಮಿತ್ರಾಬಾಯಿ, ೨೦೦೭**

ಅಕ್ಕಮಹಾದೇವಿ, ಪ್ರ. ಅಖಿಲಭಾರತ ಶರಣ ಸಾಹಿತ್ಯ ಪರಿಷತ್ತು

೩. **ಡಾ. ಕೃಷ್ಣದೇವ ಶರ್ಮ, ಎಂ.ಎ. ಪಿಎಚ್.ಡಿ. ೧೯೭೩**

ಭಕ್ತಿಕಾಲೀನ ಕೃಷ್ಣಕಾವ್ಯಕಾ ಅಧ್ಯಯನ, ಪ್ರ. ರೀಗಲ್ ಬುಕ್ ಡಿಪೋ, ಡೆಲ್ಲಿ – ೬

# ಅಧ್ಯಾಯ ೬ : ಅಧ್ಯಯನದ ಫಲಿತ

ಅಕ್ಕಮಹಾದೇವಿ ಮತ್ತು ಮೀರಾಬಾಯಿ ಇಬ್ಬರೂ ಸಂಸಾರ ಸುಖವನ್ನು ತ್ಯಜಿಸಿ ಭಗವಂತನಲ್ಲಿ ತಮ್ಮನ್ನು ಮುಡಿಪಿಟ್ಟು ಅಧ್ಯಾತ್ಮ ಜೀವಿಗಳಾಗಿ ಬದುಕಿದ್ದಾರೆ. ತಮ್ಮ ಹಾಡುಗಳ ಮೂಲಕ ತಮ್ಮ ಭಾಷೆಯ ಸಾಹಿತ್ಯಕ್ಕೆ ಅಪಾರ ಕೊಡುಗೆಯನ್ನು ನೀಡಿದ್ದಾರೆ. ಅವರಿಬ್ಬರ ಜೀವನಕ್ರಮವೂ ಹೆಚ್ಚುಕಡಿಮೆ ಒಂದೇ ರೀತಿಯದಾಗಿತ್ತು. ಇಬ್ಬರೂ ಬಾಲ್ಯದಿಂದಲೇ ತಮ್ಮ ಆರಾಧ್ಯದೇವರನ್ನೇ ಪತಿಯೆಂದು ಭಾವಿಸಿದ್ದರು. ಸವಲ್ಪ ಸಮಯ ವಿವಾಹ ಬಂಧನದಲ್ಲಿ ಬಂಧಿಯಾಗಿದ್ದರೂ ಅದು ಬಹುಬೇಗನೆ ಕಡಿದುಹೋಯಿತು. ಇಬ್ಬರೂ ತಮ್ಮ - ತಮ್ಮ ಆರಾಧ್ಯದೇವರನ್ನು ಹುಡುಕುತ್ತಾ ಅಲೆದಾಡಿದರು. ಅವನನ್ನೇ ಪತಿಯೆಂದು ನಂಬಿ ಅತನಿಗಾಗಿ ಹಂಬಲಿಸಿದರು. ಅವನ ಕುರಿತಾಗಿಯೇ ಹಾಡಿದರು. ಕೊನೆಗೆ ಅವನಲ್ಲಿಯೇ ಬಯಲಾದರು. ಆದ್ದರಿಂದ ಅವರಿಬ್ಬರ ರಚನೆಗಳಲ್ಲಿ ಸಾಕಷ್ಟು ಸಾದೃಶ್ಯ ಇರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ಅಕ್ಕಮಹಾದೇವಿ ಹಾಗೂ ಮೀರಾಬಾಯಿ ಜನ ಸಮುದಾಯವನ್ನು ಆಕರ್ಷಿಸುವುದಕ್ಕಾಗಲಿ, ಕವಯತ್ರಿಯರಾಗಬೇಕೆಂದಾಗಲಿ ಪ್ರಯತ್ನಿಸಲಿಲ್ಲ. ಭಕ್ತಿಯ ಉಲ್ಲಾಸದಲ್ಲಿ ಭಕ್ತಿ ಮತ್ತು ಪ್ರೇಮದ ಗೀತೆಗಳನ್ನು ಸ್ವಾಂತಸುಖಾಯ ಹಾಡಿದ್ದಾರೆ. ತಮ್ಮ ಹೃದಯದ ವಿರಹ ವೇದನೆಯನ್ನು ಮಧುರಗೀತೆಗಳ ಮೂಲಕ ಹೊರಸೂಸಿ ಹೃದಯವನ್ನು ಹಗುರಮಾಡಿಕೊಂಡಿದ್ದಾರೆ. ಅವರು ತಮ್ಮ ಮತವನ್ನು ಸ್ಥಾಪಿಸುವ ಹವ್ಯಾಸಕ್ಕಾಗಿ ಶಿಷ್ಯಮಂಡಳಿಯನ್ನು ಕಟ್ಟಿಕೊಳ್ಳುವ ಯತ್ನಕ್ಕಾಗಿ ಪ್ರಯಾಸಪಡಲಿಲ್ಲ. ಅಕ್ಕಮಹಾದೇವಿಯ ವಚನಗಳಲ್ಲಾಗಲಿ, ಮೀರಾಬಾಯಿಯ ಪದಗಳಲ್ಲಾಗಲಿ ಉಪದೇಶದ ಹಾಗೂ ನೀತಿಯ ಮಾತುಗಳು ತೀರಾ ಕಡಿಮೆ. ಏಕೆಂದರೆ ಕಬೀರ, ತುಲಸೀದಾಸ, ಬಸವಣ್ಣ ಮುಂತಾದವರಂತೆ ಮತಧರ್ಮವನ್ನು ಜನಕ್ಕೆ ಬೋಧಿಸುವುದನ್ನು, ಆ ಸಮಾಜದ ಲೋಪದೋಷಗಳನ್ನು, ಕುಂದುಕೊರತೆಗಳನ್ನು ತಿದ್ದಿ ಜನರನ್ನು ಸತ್ಪುರುಷರನ್ನಾಗಿ ಮಾಡುವುದನ್ನು ಅವರು ತಮ್ಮ ಜೀವನದ ಗುರಿಯಾಗಿಸಿದಿಕೊಂಡವರಲ್ಲ. ಏನಿದ್ದರೂ ಎಂತಿದ್ದರೂ ಅವರ ಜೀವನದ ಉದ್ದೇಶ ಏಕಾಂತದಲ್ಲಿ ತಮ್ಮ ಪ್ರೀತಿಯ ಚೆನ್ನಮಲ್ಲಿಕಾರ್ಜುನ ಹಾಗೂ ಗಿರಿಧರಗೋಪಾಲನನ್ನು ನಿಶ್ಚಲ ಭಕ್ತಿಯಿಂದ ಸಾಧಿಸಿ ಕೃತಕೃತ್ಯತೆಯನ್ನು ಪಡೆಯುವುದೇ ಆಗಿದ್ದಿತು. ಅವರಿಬ್ಬರೂ ಹಿರಿಯ ಅನಿಭಾವಿಗಳಾಗಿ, ಆಧ್ಯಾತ್ಮಿಕ ವ್ಯಕ್ತಿಗಳಾಗಿ ಬಾಳಿದವರು. ಮತ ಪ್ರವರ್ತಕರಾಗಿ, ಪ್ರಚಾರಕರಾಗಿ ಬಾಳಿದವರಲ್ಲ. ಹಾಗಾಗಿ ಮೀರಾಬಾಯಿಯ ಪದಗಳಲ್ಲಾಗಲಿ, ಅಕ್ಕಮಹಾದೇವಿಯ ವಚನಗಳಲ್ಲಾಗಲಿ, ಅತ್ಯಂತ ಗಹನವೂ, ಜಟಿಲವೂ ಆದ ಮತಧರ್ಮ ತತ್ವಗಳನ್ನು ಕುರಿತ ಉಪದೇಶಗಳಾಗಲಿ, ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಕುರಿತ ಬೋಧನೆಗಳಾಗಲಿ ಕಂಡು ಬರುವುದಿಲ್ಲ.

ಒಂದು ವೇಳೆ ಕಂಡುಬಂದರೂ ಅವು ಬರುವ ಸನ್ನಿವೇಶ ಅವರಿಬ್ಬರ ಸತಿಪತಿ ಭಾವದ ಪಾರಮಾರ್ಥಿಕ ಶೃಂಗಾರ ಪ್ರಪಂಚದಲ್ಲಾದುದರಿಂದ ಅವು ನೀರಸವಾಗಿರುವುದಿಲ್ಲ.

ಈ ಪ್ರಪಂಚದ ಸುಖ ಕ್ಷಣ ಭಂಗುರ, ನಶ್ವರ, ದುಃಖಮೂಲ. ಇದಕ್ಕೆ ಕಾರಣ ಮಾಯೆ. ಈ ಮಾಯೆಯಿಂದ ನಮ್ಮನ್ನು ಮುಕ್ತಗೊಳಿಸು ಎಂದು ಅವರಿಬ್ಬರೂ ಭಗವಂತನಲ್ಲಿ ಅಂಗಲಾಚಿದ್ದಾರೆ. ಈ ಪ್ರಾಪಂಚಿಕ ಕೆಲಸದಲ್ಲಿ ನಮ್ಮನ್ನು ನಾವು ಮರೆತಿದ್ದೇವೆ. ನಿಮ್ಮ ಆರಾಧನೆ ಹೇಗೆ? ಎಂದು ಅವರು ಹಳಹಳಿಸಿದ್ದಾರೆ. ಅಕ್ಕಮಹಾದೇವಿ –

ಊರ ಸೀರೆಗೆ ಅಗಸ ತಡಬಡಗೊಂಬಂತೆ
ಹೊನ್ನೆನ್ನದು, ಹೆಣ್ಣೆನ್ನದು, ಮಣ್ಣೆನ್ನದು ಎಂದು
ನೆನೆ ನೆನೆದು ನಿಮ್ಮನರಿಯದ ಕಾರಣ
ಕೆಮ್ಮನೆ ಕೆಟ್ಟೆನಯ್ಯ ಮಾಯದ ಸಂಸಾರದಲ್ಲಿ ಸಿಲುಕಿದೆನು

ಎಂದು ದುಃಖ ಮಾಡಿದರೆ, ಮೀರಾ ಬಾಯಿ ದಿನದ ಬಹುಭಾಗವನ್ನೆಲ್ಲ ಕೆಲಸ ಹಾಗೂ ನಿದ್ರೆಯಲ್ಲಿ ಕಳೆದ ಮೇಲೆ ಭಗವಂತನನ್ನು ಕಾಣುವುದು ಹೇಗೆ? ಎಂದು ಚಿಂತಿಸಿದ್ದಾಳೆ.

"ಪ್ರಭುಸೆ ಮಿಲನ ಕೈಸೆ ಹೋಯೆ
ಚಾರ ಪಹರ ಧಂದೇಮೆಂ ಬೀತೆ, ತೀನ ಪಹರ ರಹೆ ಸೋಯೆ ॥"

ನಾನು ಅಬಲೆ, ಕೈಜೋಡಿಸಿ ಬೇಡುತ್ತೇನೆ. ಸಂಸಾರ ಬಂಧನವನ್ನು ಕತ್ತರಿಸಿಹಾಕು ಎಂದು ಮೀರಾಬಾಯಿ ದೇವರಲ್ಲಿ ಬೇಡಿಕೊಂಡಿದ್ದಾಳೆ –

"ಅರಜಕರ ಅಬಲ ಕರ ಜೋರೀ ಶ್ಯಾಮ ತುಮ್ಹಾರೀ ದಾಸೀ
ಮೀರಾ ಕೆ ಪ್ರಭು ಗಿರಿಧರ ನಾಗರ ಕಾಟಾ ಮ್ಹಾರೋ ಗಾಂಸೀ ॥"

ಪರಮಾತ್ಮನ ದರ್ಶನವಾಗಬೇಕಾದರೆ ವಿನಯಬೇಕು, ಭಕ್ತಿ ಬೇಕು, ಕ್ರೋಧ ಅಹಂಕಾರಗಳು ತುಂಬಿದಾಗ ಆತನ ದರ್ಶನ ಅಸಾಧ್ಯ ಎಂಬುದು ಅವರ ಅಭಿಪ್ರಾಯ. ಹಾಗಾಗಿ ಮನುಷ್ಯನಿಗೆ ಅಹಂಕಾರ ಒಳ್ಳೆಯದಲ್ಲ. ಅಕ್ಕಮಹಾದೇವಿ ಈ ಕೆಳಗಿನಂತೆ ಹೇಳಿ ಅಹಂಕಾರ ಬಿಡಲು ಕೇಳಿಕೊಂಡಿದ್ದಾಳೆ.

ಎನಗೇಕಯ್ಯ ಸಾವ ಪ್ರಪಂಚ ಪುತ್ಥಳಿ
ಕುಲಭ್ರಮೆ, ಜಾತಿ ಭ್ರಮೆ, ಮತಶಾಸ್ತ್ರ ಭ್ರಮೆ

ರಾಜ್ಯಭ್ರಮೆ, ಧನ ಧಾನ್ಯ ಪುತ್ರ ಮಿತ್ರ ಭ್ರಮೆ
ಯೋಗ ಭ್ರಮೆ ಸರ್ವಮೂಲಹಂಕಾರ".

ಮಿರಾಬಾಯಿ ಕೂಡ –

ಯಹಿ ವಿಧಿ ಭಕ್ತಿ ಕೈಸೆ ಹೋಯ
ಮನಕೀ ಮೈಲ ಹಿಯತೆ ಛೂಟೀ, ಕಾಮಕೂಕರ ಲೋಭ
ಡೋರಿ ಬಾಂಧಿ ಮೋಹಿ ಚಂಡಾಲ
ಕ್ರೋಧ ಕಸಾಯಿ ರಹತ ಘರಮೆ ಕೈಸೇ ಮಿಲೆ ಗೋಪಾಲ ॥

ಕಾಮ, ಕ್ರೋಧ, ಲೋಭ ಮನೆ ಮಾಡಿದಾಗ ಭಕ್ತಿ ಹೇಗೆ? ಗೋಪಾಲನ ದರ್ಶನ ಹೇಗೆ? ಎಂದು ಚಿಂತಿಸಿದ್ದಾಳೆ. ಅದಕ್ಕಾಗಿ ಮನುಷ್ಯನಿಗೆ ಎಚ್ಚರಿಗೆ ನೀಡಿದ್ದಾಳೆ –

ಯಾ ದೇಹೀಸೇ ಗರಬ ನ ಕರನಾ ಮಾಠಿಮಾಂ ಮಿಲ ಜಾಸೀ

ಈ ಪ್ರಪಂಚ ಅವರನ್ನು ಬೆನ್ನು ಬಿಡದೆ ಕಾಡುತ್ತಿದೆ. ಅದೇ ಅವರಿಗೆ ಶತ್ರು, ಬಾರದ ಭವಗಳಲ್ಲಿ ಬಂದಿದ್ದಾರೆ. ಅದಕ್ಕಾಗಿ ಅಕ್ಕ "ಎನ್ನ ಸುತ್ತಿದ ಪ್ರಪಂಚವ ಬಿಡಿಸು. ನಿಮ್ಮ ಧರ್ಮ, ಬಿಟ್ಟಿಹೆನೆಂದರೆ ಬಿಡದೀ ಮಾಯೆ" ಎಂದು ಅಂಗಲಾಚಿದರೆ, ಮೀರಾಬಾಯಿಯೂ ಸಹ 'ಭವ ಸಾಗರದ ಮಧ್ಯದಲ್ಲಿ ಮುಳುಗಿದ್ದೇನೆ. ನೀನೇ ಶರಣು. ಈ ಜಗತ್ತಿನಲ್ಲಿ ನನಗಾರೂ ಇಲ್ಲ. ಸಂಸಾರದ ಬಲೆಯನ್ನು ಕತ್ತರಿಸು' ಎಂದು ಭಗವಂತನಲ್ಲಿ ಮೊರೆಯಿಟ್ಟಿದ್ದಾಳೆ.

ಭವಸಾಗರ ಮಝು ಧಾರಾಂ ಬೂಡ್ಯಾ, ಧಾರಿ ಸರಣ ಲಹ್ಯಾಂ
ಯೇಂ ಸಂಸಾರವಿಕಾರ ಸಾಗರ ಬೀಚಮೆಂ ಘೇರೀ
ಯಾ ಜಗಮೆ ಕೋಯೀ ನಹೀಂ ಅಪನಾ"
ಮೀರಾ ದಾಸೀ ರಾಮ ಭರೋಸೆ ಜಗಕಾ ಘಂದಾ ನಿವಾರ ॥

ಅಕ್ಕ ಮಹಾದೇವಿ ಹಾಗೂ ಮೀರಾಬಾಯಿ ಆಡಂಬರಪ್ರಿಯರಲ್ಲ. ಅವರು ಬಾಹ್ಯಾಡಂಬರಗಳನ್ನು ವಿರೋಧಿಸಿದ್ದಾರೆ. ಅವರ ದೃಷ್ಟಿಯಲ್ಲಿ ತೀರ್ಥಕ್ಷೇತ್ರ, ವ್ರತ, ಉಪವಾಸ ಎಲ್ಲವೂ ವ್ಯರ್ಥ. ವೇದಶಾಸ್ತ್ರ, ಪುರಾಣಗಳಿಂದ ಏನನ್ನೂ ಸಾಧಿಸಲು ಸಾಧ್ಯವಿಲ್ಲ. ಕಾವಿ ತೊಡುವುದರಿಂದ,ಸನ್ಯಾಸಿಯಾಗುವುದರಿಂದ ಏನೂ ಪ್ರಯೋಜನವಿಲ್ಲ. ಹಾಗಾಗಿ ಅಕ್ಕ ಮಹಾದೇವಿ ಈ ರೀತಿ ಹೇಳಿ ಮನಸ್ಸಿನ ಮೂಲವನ್ನು ತಿಳಿಯಲು ಕರೆಯುತ್ತಿದ್ದಾಳೆ.

ವೇದಶಾಸ್ತ್ರ ಪುರಾಣಗಮಂಗಳೆಲ್ಲ
ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು
ಕಾಣಿ ಭೋ – ಇವ ಕುಟ್ಟಲೇಕೆ?
ಅತ್ತಲಿತ್ತ ಹರಿವ ಮನದ
ಶಿರವನರಿದೊಡೆ, ಬಟ್ಟ ಬರಿಯ
ಬಯಲು ಚೆನ್ನಮಲ್ಲಿಕಾರ್ಜುನ

ಮೀರಾಬಾಯಿಯೂ ಸಹ –

ಕಹಾ ಭಯೋ ತೀರಥ ವ್ರತ ಕೀನ್ಹೆ, ಕಹಾಲಿಯೆ ಕರವತ ಕಾಸೀ
ಕಹಾ ಭಯಾ ಯಾ ಭಗವಾ ಪಹರ್‍ಯಾ, ಘರ ತಜ ಲಯಾ ಸನ್ಯಾಸೀ
ಜೋಗಿ ಹೋಯಾ, ಜುಗತ ಣಾ ಜಾಣ ಉಲಟ ಜಣಮ ಫಿರ ಫಾಂಸಿ ॥

ತೀರ್ಥಯಾತ್ರೆ, ವ್ರತ, ಉಪವಾಸ ಮಾಡುವುದರಿಂದ , ಕಾಶಿಗೆ ಹೋಗುವುದರಿಂದ ಆಗುವ ಲಾಭವೇನು? ಭಗವಾ ಉಟ್ಟರೆ, ಸನ್ಯಾಸಿ ಆದರೆ ಆಗುವುದೇನು? ಯೋಗದ ಮರ್ಮವನ್ನು ತಿಳಿಯದೆ ಯೋಗಿಯಾದರೆ ಪುನರ್ಜನ್ಮ ತಪ್ಪಿದ್ದಲ್ಲ ಎಂದು ಹೇಳಿದ್ದಾರೆ.

"ಸ್ವಾಂತ ಸುಖಾಯ" ರಾಮಚರಿತ ಮಾನಸ ರಚಿಸುತ್ತೇನೆಂದು ಹೇಳಿ ತುಲಸೀದಾಸರು ಪರಸುಖಾಯದ ಅನೇಕ ಮಾತುಗಳನ್ನು ಹೇಳಿದ್ದಾರೆ. ಲೋಕದ ಡೊಂಕ ನೀವೇಕೆ ತಿದ್ದುವಿರಿ ಎಂದು ಹೇಳಿದ ಬಸವಣ್ಣನವರು ಲೋಕದ ಡೊಂಕನ್ನು ತಿದ್ದಲು ಉಪದೇಶ ಮಾಡಿದ್ದಾರೆ. ಜ್ಞಾನಕ್ಕಿಂದ ಭಕ್ತಿ ಶ್ರೇಷ್ಠವೆಂದು ತುಲಸೀದಾಸರು ರಾಮಚರಿತಮಾನಸದುದ್ದಕ್ಕೂ ಹೇಳಿದ್ದಾರೆ. ಭಕ್ತಿಯ ಮಹತ್ವವನ್ನು ತೋರಿಸಿಕೊಡಲು ಸೂರದಾಸರು ಭಕ್ತಿಯ ಪ್ರತೀಕ ಗೋಪಿಯರನ್ನು ಸಮಾಧಾನ ಮಾಡಲು ಜ್ಞಾನದ ಪ್ರತೀಕವಾದ ಉದ್ಧವವನ್ನು ಕರೆತಂದಿದ್ದಾರೆ. ಜ್ಞಾನಿ ಉದ್ಧವಭಕ್ತಿಯ ಸಾಕಾರ ರೂಪಿಗಳಾದ ಗೋಪಿಯ ಕಾಲಿಗೆ ಬಿದ್ದಿದ್ದಾನೆ. ಯೋಗಿಗಳ ಅಪಹಾಸ್ಯ ಮಾಡಿ, ಬಾಹ್ಯಾಡಂಬರಗಳನ್ನು ಖಂಡಿಸಿ ಕಬೀರದಾಸರು ಭಕ್ತಿಯೇ ರಾಜಮಾರ್ಗವೆಂದು ಸಾರಿದ್ದಾರೆ. ಆದರೆ ಅಕ್ಕಮಹಾದೇವಿ ಹಾಗೂ ಮೀರಾಬಾಯಿ ಯಾವುದನ್ನೂ ಶ್ರೇಷ್ಠವೆಂದೂ ಕನಿಷ್ಠವೆಂದೂ ಪ್ರತಿಪಾದಿಸುವುದಕ್ಕೆ ಹೋಗಲಿಲ್ಲ. ಜ್ಞಾನ, ವೈರಾಗ್ಯ, ಬಾಹ್ಯಾಡಂಬರ ಯಾವುದನ್ನೂ ಅವರು ತಿರಸ್ಕರಿಸಲಿಲ್ಲ, ದ್ವೇಷಿಸಲಿಲ್ಲ. ವರ್ಣಿಸಲೂ ಹೋಗಲಿಲ್ಲ. ಅವತಾರ, ಮೂರ್ತಿಪೂಜೆಯ ಬಗ್ಗೆ ಅವರಿಗೆ ವಿರೋಧವೂ ಇಲ್ಲ, ಆಸಕ್ತಿಯೂ ಇಲ್ಲ. ಅವರಿಗೆ ತಮ್ಮ ಆರಾಧ್ಯದೇವರನ್ನು ಒಲಿಸಿಕೊಳ್ಳುವುದೊಂದೇ ಚಿಂತೆ. ಅದಕ್ಕಾಗಿ ಏನನ್ನು ಬೇಕಾದರೂ ಮಾಡಲು ಸಿದ್ಧರಿರುವರು. ಆ

ಪರಮಾತ್ಮನನ್ನು ಒಲಿಸಿಕೊಳ್ಳಲು ಕಲ್ಲನ್ನೂ ಪೂಜಿಸಬಹುದು, ಕಾವಿಯನ್ನೂ ಉಟ್ಟುಕೊಳ್ಳಬಹುದು. ಭಸ್ಮಧರಿಸಿ ಯೋಗಿನಿಯಾಗಲೂಬಹುದು. ಚೆನ್ನಮಲ್ಲಿಕಾರ್ಜುನ ಹಾಗೂ ಗಿರಿಧರ ಗೋಪಾಲನಲ್ಲಿಯೇ ಇವರಿಗೆ ಅಖಂಡ ವಿಶ್ವಾಸ, ನಂಬಿಕೆ. ಧರ್ಮ-ಸಂಪ್ರದಾಯ ಯಾವುದೇ ಇರಲಿ, ಅದರಲ್ಲಿರುವ ಒಳ್ಳೆಯ ವಿಚಾರಗಳನ್ನು ಇವರು ಸ್ವೀಕರಿಸಿದ್ದಾರೆ. ಆದರೆ ಆ ಧರ್ಮ-ಸಂಪ್ರದಾಯಗಳಲ್ಲಿ ದೀಕ್ಷಿತರಾಗಲಿಲ್ಲ. ಏಕೆಂದರೆ ಎಲ್ಲ ನದಿಗಳು ಕೊನೆಗೆ ಸಮುದ್ರವನ್ನು ಸೇರುವಂತೆ, ಆ ಎಲ್ಲ ಮಾರ್ಗಗಳು ಪರಮಾತ್ಮನನ್ನು ಕಾಣುವುದಕ್ಕೆ, ಅದಕ್ಕಾಗಿ ಮಾರ್ಗ ಯಾವುದಾದರೇನು? ತಮ್ಮ ಪ್ರಿಯತಮನ ನೆಲೆಯನ್ನು ತಲುಪಲು ಯಾವ ಮಾರ್ಗ ಸುಗಮವೋ, ಅನುಕೂಲವೋ ಆ ಮಾರ್ಗವನ್ನು ಅವರು ಹಿಡಿದಿದ್ದಾರೆ. ಅಲ್ಲಿ ಹೋಗುವುದೇ ಅವರ ಜೀವನದ ಉದ್ದೇಶ. ಅದಕ್ಕಾಗಿ ಮೀರಾಬಾಯಿ –

ಚಲಾ ವಾಹಿ ದೇಶ ಪ್ರೀತಮ ಪಾವ ಚಲಾ ವಾಹೀ ದೇಶ

ಪ್ರಿಯತಮ ಯಾವ ದೇಶಕ್ಕೆ ಹೋಗಿದ್ದಾನೋ ನಾನೂ ಅಲ್ಲಿಗೇ ಹೋಗುತ್ತೇನೆ ಎಂದು ಹೇಳಿದ್ದಾಳೆ.

ಅವರು ತಮ್ಮ ಸಾಧನೆಯಲ್ಲಿ ಎಲ್ಲವನ್ನೂ ಮರೆತಿದ್ದಾರೆ. ಜಗತ್ತಿನ ಚಿಂತೆ ಅವರಿಗಿಲ್ಲ. ಅಕ್ಕಮಹಾದೇವಿ ಹೇಳುವಂತೆ

ನಮಗೆ ನಮ್ಮ ಲಿಂಗದ ಚಿಂತೆ, ನಮಗೆ
ನಮ್ಮ ಭಕ್ತರ ಚಿಂತೆ, ನಮಗೆ ನಮ್ಮ ಆದ್ಯರ
ಚಿಂತೆ, ನಮಗೆ ನಮ್ಮ ಚೆನ್ನಮಲ್ಲಿಕಾರ್ಜುನನ
ಚಿಂತೆಯಲ್ಲದೆ ಲೋಕದ ಮಾತು ನಮಗೇಕಣ್ಣ.

ಹಾಗಾಗಿ ಲೋಕದ ಮಾತು ತೆಗೆದುಕೊಂಡು ಅವರಿಗೆ ಚಿಂತೆ ಮಾಡಬೇಕಾಗಿಲ್ಲ. ಆ ಪರಮಾತ್ಮ ಇವರ ಹೃದಯದಲ್ಲಿ ಭಕ್ತಿಯ ಸಸಿಯನ್ನು ನೆಟ್ಟು ಎಲ್ಲಿಯೋ ಹೋಗಿದ್ದಾನೆ. ಅವನನ್ನು ಕಾಣುವುದೊಂದೇ ಇವರಿಗಿರುವ ಚಿಂತೆ. ಹಾಗಾಗಿ ಮೀರಾಬಾಯಿಯೂ ಸಹ –

ಐಸೀ ಲಗನ ಲಗಾಯ ಕಹಾ ತೂ ಜಾಸೀ
ತುಮ ದೇಖೇ ಬಿನಾ ಕಲನ ಪಡತ ಹೈ
ತಡಫ ತಡಫ ಜಿಯ ಜಾಸೀ

ನಿನ್ನಲ್ಲಿ ಅತ್ಯಂತ ಪ್ರೀತಿ ಇದೆ. ನೀನು ಎಲ್ಲಿದ್ದಿ? ನಿನ್ನನ್ನು ನೋಡದೆ ನನ್ನ ಜೀವ ಒದ್ದಾಡುತ್ತಿದೆ ಎಂದು ಪರಮಾತ್ಮನನ್ನು ಕಾಣದೆ ಪರಿತಪಿಸಿದ್ದಾಳೆ.

ಕರ್ಮಕಾಂಡ, ಹಠಯೋಗ, ಜ್ಞಾನ-ಭಕ್ತಿಗಳ ಸಂಕೀರ್ಣತೆಯನ್ನು ದೂರಮಾಡಿ ಅವರಿಬ್ಬರೂ ತಮ್ಮ ಆರಾಧ್ಯದೇವರಲ್ಲಿ ಆಸಕ್ತರಾಗಿದ್ದಾರೆ. ಯಾವ ಯುಗದಲ್ಲಿ ಭಕ್ತರು ಜ್ಞಾನ, ಯೊಗ, ಕರ್ಮಕಾಂಡಗಳ ನಿಂದನೆ ಮಾಡಿ ತಮ್ಮ ವಿಶಿಷ್ಟಮಾರ್ಗವೆ ಶ್ರೇಷ್ಠವೆಂದು ಪ್ರತಿಪಾದಿಸುವುದೇ ತಮ್ಮ ಸಫಲತೆ ಎಂದು ತಿಳಿದಿದ್ದರೋ ಅದೇ ಯುಗದಲ್ಲಿ ಈ ಎಲ್ಲ ಸಂಕೀರ್ಣತೆಯನ್ನು ಹೋಗಲಾಡಿಸಿ ವಿಶುದ್ಧ ಭಕ್ತಿ ಭಾವನೆಯ ಆದರ್ಶವನ್ನು ಸ್ಥಾಪಿಸುವ ಕೆಲಸವನ್ನು ಅಕ್ಕಮಹಾದೇವಿ ಮತ್ತು ಮೀರಾಬಾಯಿ ಮಾಡಿದ್ದಾರೆ.

ಅಕ್ಕಮಹಾದೇವಿ ಮತ್ತು ಮೀರಾಬಾಯಿಯರ ಭಕ್ತಿ ವಿಶಿಷ್ಟವಾದುದಾಗಿದೆ. ಭಗವಂತನ ಕೃಪಾಪ್ರಾಪ್ತ ಭಕ್ತನಿಗೆ ದೀನತನ ಶೋಭಿಸುವುದಿಲ್ಲ. ಭಗವಂತನು ಅಭಿಮಾನವನ್ನು ದ್ವೇಷಿಸುತ್ತಿರಬಹುದು. ಆದರೆ ಆತ್ಮಾಭಿಮಾನವನ್ನಲ್ಲ. ಅಕ್ಕಮಹಾದೇವಿ ಮತ್ತು ಮೀರಾಬಾಯಿ ತಮ್ಮ ದೇಹದ ಅಭಿಮಾನವನ್ನೂ ತ್ಯಜಿಸಿದ್ದಾರೆ. ಏಕೆಂದರೆ ಅಭಿಮಾನ, ಅಹಂಕಾರಗಳಿದ್ದಾರ ಆತ್ಮಸಮರ್ಪಣೆ ಅಸಂಭವ. ಆದರೆ ಅವರು ಆತ್ಮಾಭಿಮಾನವನ್ನು ತ್ಯಜಿಸಿಲ್ಲ. ಅವರು ಎಂದಿಗೂ ತಮ್ಮನ್ನು ದೀನ, ಹೀನ, ತುಚ್ಛ ಎಂದು ಕರೆದುಕೊಂಡಿಲ್ಲ. ಅವರ ಭಕ್ತಿ ಭಾವನೆಯಲ್ಲಿ ಈ ದೀನತ್ವಕ್ಕೆ, ಅಸಮರ್ಥತೆಗೆ ಸ್ವಲ್ಪವೂ ಅವಕಾಶವಿಲ್ಲ. ಪರಮಾತ್ಮ ಜಗತ್ತಿನ ಸ್ವಾಮಿ, ಶ್ರೇಷ್ಠ, ಶಕ್ತಿಶಾಲಿ ಇದನ್ನು ಅಲ್ಲಗಳೆಯುವಂತಿಲ್ಲ. ಆದರೆ ಭಕ್ತನಿಗೂ ತನ್ನದೇ ಆದ ಸ್ವತಂತ್ರ ಅಸ್ತಿತ್ವವಿದೆ ಎಂಬುದನ್ನು ಮರೆಯುವಂತಿಲ್ಲ. ಅಕ್ಕಮಹಾದೇವಿ ಮತ್ತು ಮಿರಾಳ ಭಕ್ತಿಭಾವನೆ ಈ ರೀತಿಯದು. ಆತ್ಮಾಭಿಮಾನಿಯಾದ ಮೀರಾಬಾಯಿ ತನ್ನ ಗಿರಿಧರನ ಉಪೇಕ್ಷೆಯನ್ನು ಸಹಿಸಳು –

ಮಾಯೀ ಮ್ಹಾರೀ ಹರಿ ನ ಬೂಝೀ ಬಾತ ।
ಪಿಂಡ ಮಾಸೂ ಪ್ರಾಣ ಪಾಪೀ ನಿಕಸ ಕ್ಯೂಂ ನಹೀಂ ಜಾತ ॥

ಹರಿಯು ತನ್ನ ಮಾತನ್ನು ಕೇಳಲೊಲ್ಲ. ಇದ್ದೇನು ಮಾಡಲಿ? ಈ ಅವಿಚಲ ಭಕ್ತಿ ಉತ್ಕಟ ಪ್ರೇಮವಿದ್ದರೂ ಭಗವಂತ ದರ್ಶನ ನೀಡುವುದಿಲ್ಲ. ಆಗ ಮೀರಾ ಧೈರ್ಯದಿಂದ –

ಜಾವೋ ಹರಿ ನಿರ ಮೋಹ ಡಾರೆ ಜಾಣೀ ಥಾರೀ ಪ್ರೀತ
ಲಗನ ಲಗೀ ತಬ ಔರ್ ಬಾತ್ ಹೀ ಅಬ ಕಮು ಅವಲೀ ರೀತ ।

"ಹರಿ ನೀನು ನಿರ್ಮೋಹಿ, ನಿನ್ನ ಪ್ರೀತಿ ನನಗೆ ಗೊತ್ತಿದೆ. ಹೋಗು" ಎಂದು ಆ ಭಗವಂತನನ್ನೂ, ಆತನ ಪ್ರೇಮವನ್ನೂ ಆಹ್ವಾನಿಸಿದ್ದಾಳೆ. ಮೀರಾ ಭಗವಂತನಲ್ಲಿ ಭಕ್ತಿ ಇಟ್ಟದ್ದಾಳೆ, ಪ್ರೇಮಿಸಿದ್ದಾಳೆ, ಪ್ರೇಮದಲ್ಲಿ ಆತ್ಮ ಸಮರ್ಪಣೆ ಮಾಡಿಕೊಂಡಿದ್ದಾಳೆ. ಆದರೆ ತನ್ನನ್ನು ದೀನಳನ್ನಾಗಿ ಮಾಡಿಕೊಳ್ಳಲಿಲ್ಲ. ಅಂತೆಯೇ ಅಕ್ಕಮಹಾದೇವಿ ತನ್ನ ಭಗವಂತನ ಮುಂದೆ ಬಗೆಬಗೆಯಾಗಿ ತನ್ನ ಹೃದಯವನ್ನು ತೋಡಿಕೊಂಡಿದ್ದಾಳೆ. ಆಕೆಯ ಪ್ರಿಯತಮ ಚೆನ್ನಮಲ್ಲಿಕಾರ್ಜುನನಿಗೆ ಎರಡರ ಮುನಿಸು. ಆತನಿಗೆ ಬುದ್ಧಿಹೇಳಿ ಕರೆತರಬೇಕೆಂದು ಹೇಳಿದ್ದಾಳೆ –

ಚೆನ್ನಮಲ್ಲಿಕಾರ್ಜುನನಿಗೆ ಎರಡರ ಮುನಿಸವ್ವ,
ತಿಳಿಹೇಳಿ, ಬುದ್ಧಿಯ ಹೇಳಿ ಕರೆದು ತಾರವ್ವಾ"

ಆದರೂ ಆತ ಬರಲಿಲ್ಲ. ಅಕ್ಕಮಹಾದೇವಿಯ ಆತ್ಮಾಭಿಮಾನ ಕೆರಳಿದೆ. ಅವಳು –

ಅಯ್ಯಾ, ನೀ ಕೇಳಿದರೆ ಕೇಳು, ಕೇಳದಿದ್ದರೆ ಮಾಣು,
ನಾನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯಾ
ಅಯ್ಯಾ, ನೀ ಒಲಿದರೆ ಒಲಿ, ಒಲಿಯದಿದ್ದರೆ ಮಾಣು,
ನಾ ನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯ
ಚೆನ್ನಮಲ್ಲಕಾರ್ಜುನ ನಿಮ್ಮ ಪೂಜಿಸಿ ಹರುಷದೊಳೋಲಾಡುವೆನಯ್ಯ

ಎಂದು ಆ ಭಗವಂತನನ್ನೇ ಆಹ್ವಾನಿಸಿದ್ದಾಳೆ.

ಭಕ್ತನ ಕೆಲಸ ಭಕ್ತಿ ಮಾಡುವುದೇ ಹೊರತು ಅಂಗಲಾಚಿ ಬೇಡಿಕೊಳ್ಳುವುದಲ್ಲ. ಅಕ್ಕಮಹಾದೇವಿ ಹಾಗೂ ಮೀರಾಬಾಯಿಯರದು ಆ ಬಗೆಯ ಭಕ್ತಿ. ಅದಕ್ಕಾಗಿ ಅವರು ತಮ್ಮನ್ನು ಹೀನ, ದೀನ, ಸಣ್ಣವರೆಂದು ತಿಳಿದುಕೊಂಡಿಲ್ಲ. ಆ ರೀತಿ ಪ್ರಯತ್ನವನ್ನೂ ಮಾಡಲಿಲ್ಲ. ತಮ್ಮ ಹೃದಯದ ವೇದನೆ ಮತ್ತು ಸಹನಶೀಲತೆಯ ಬಲದಿಂದ ತಮ್ಮ ಆರಾಧ್ಯದೇವರನ್ನು ಕಾಣುವ ಪ್ರಯತ್ನವನ್ನು ಮಾಡಿದ್ದಾರೆ. ಅವರ ಭಕ್ತಿಯಲ್ಲಿ ಉಲ್ಲಾಸವಿದೆ. ಅದು ನೇರವಾಗಿ ಹೃದಯದ ಆಳದಿಂದ ಬಂದದ್ದು. ಅದರ ಮೇಲೆ ಬುದ್ಧಿಯ ನಿಯಂತ್ರಣವಿಲ್ಲ. ಮಾನಾಪಮಾನಗಳ ಭಯವಿಲ್ಲ. ಆ ಉಲ್ಲಾಸ ಸ್ವಚ್ಛಂದ ಹಾಗೂ ಪವಿತ್ರವಾಗಿದೆ. ಅದಕ್ಕಾಗಿ ಭಕ್ತಿಯ ಈ ಉದಾತ್ತ ಹಾಗೂ ಉನ್ನತ ಮಟ್ಟವನ್ನು ತಲುಪಲು ಸ್ತ್ರೀಗೆ ಮಾತ್ರ ಸಾಧ್ಯ. ಪುರುಷನಿಗೆ ಅದು ಸಾಧ್ಯವಿಲ್ಲ. ಯಾಕೆಂದರೆ ಅಂತಹ ಆತ್ಮ ಸಮರ್ಪಣೆ ಅವಳೊಬ್ಬಳೇ ಮಾಡಬಲ್ಲಳು. ಅಕ್ಕಮಹಾದೇವಿ ಮತ್ತು ಮೀರಾಬಾಯಿ ಈ ವಿಶಿಷ್ಟ ಭಕ್ತಿಯ ಪ್ರತೀಕವಾಗಿದ್ದಾರೆ. ದಾಂಪತ್ಯಭಾವದ ಮಧುರ ಭಕ್ತಿ ಅವರಲ್ಲಿ ಪರಿಪೂರ್ಣತೆಯನ್ನು ಪಡೆದಿದೆ.

ಕಾವ್ಯಾನಂದ ಬ್ರಹ್ಮಾನಂದದ ಸೋದರ. ಋಷಿಯಾದವನೇ ಇಂತಹ ಕಾವ್ಯ ರಚಿಸಬಲ್ಲ, ಋಷಿಯಿಂದಲೇ ರಸಸೃಷ್ಟಿ ಸಾಧ್ಯ ಎಂದು ಹೇಳಲಾಗುತ್ತಿದೆ. ಈ ದೃಷ್ಟಿಯಿಂದ ನೋಡಿದರೆ ಅಕ್ಕಮಹಾದೇವಿ ಮತ್ತು ಮೀರಾಬಾಯಿ ಶ್ರೇಷ್ಠ ಕವಯತ್ರಿಯರೆಂದು ಹೇಳಬಹುದು. ತಮ್ಮ ಪದಗಳನ್ನು ಅಥವಾ ವಚನಗಳನ್ನು ಜನ ಓದಬೇಕು ಅಥವಾ ಕೇಳಬೇಕು ಎಂಬ ಇಚ್ಛೆಯಿಂದ ಅವರು ಬರೆಯಲಿಲ್ಲ. ಅವರ ಮೋಹಕವಾದ ವ್ಯಕ್ತಿತ್ವವೇ ಅವರ ಪದಗಳನ್ನು ಸರಸ ಹಾಗೂ ಮಧುರವಾಗಿ ಮಾಡಿದೆ. ಅವರ ಮಾತು ಅವರ ಬದುಕಿನ ಉತ್ಪನ್ನವಾಗಿದೆ. ಅವರ ಭಕ್ತಿ ಸರಳ. ನಿಶ್ಚಲ ಅನುರಕ್ತಿ ಸಾಧನೆ, ತಲ್ಲೀನತೆ ಮತ್ತು ಮಾದಕತೆ ಅವರ ಶಬ್ದಗಳಲ್ಲಿ ಹರಿಯುತ್ತಿದೆ. ಈ ಸಾಧಕಿಯರ ಪ್ರಗಾಢ ಭಕ್ತಿಭಾವದಿಂದ ಮೂಡಿದ ಶಬ್ದಗಳಲ್ಲಿ ಚಮತ್ಕಾರವಿದೆ, ಕಂಪನವಿದೆ, ಸೌರಭವಿದೆ, ಭಾವಾವೇಶವಿದೆ, ತೀವ್ರ ಅನುಭೂತಿ ಇದೆ. ಹೃದಯವನ್ನು ಗದ್ಗದಗೊಳಿಸುವ ಶಕ್ತಿಯಿದೆ.

ಅಕ್ಕಮಹಾದೇವಿ ಮತ್ತು ಮೀರಾಬಾಯಿಯ ಪದಗಳು ಭಕ್ತ ಯೋಗಿನಿಯ ಹೃದಯದ ನಿಜವಾದ ಕತೆ, ನಿಸ್ಸೀಮ ಆಕಾಶದಲ್ಲಿ ವಿಹಾರ ಮಾಡುವ ಪಕ್ಷಿಯ ಗಾನ, ಮನದ ನಿರಾಶೆ, ವೇದನೆ ಮತ್ತು ಅಪೂರ್ವ ಭಕ್ತಿ ಇವುಗಳಿಂದ ಇವರ ಪದಗಳು ತುಂಬಿವೆ. ಇವರ ಪದಗಳಲ್ಲಿರುವ ವಿರಹ ವ್ಯಥೆ, ವೇದನೆ ಯಾರೊಬ್ಬರ ಮುಂದೆಯೂ ಹೇಳಿ ಕೇಳಿಕೊಳ್ಳುವುದಕ್ಕಲ್ಲ, ಆತ್ಮನಿವೇದನೆಯ ಮಾದರಿಯದು. ಪ್ರತಿ ಗಳಿಗೆ, ಪ್ರತಿಕ್ಷಣ ತಮ್ಮ ಕಣ್ಣೆದುರಿನಲ್ಲಿ ಅವರ ತಮ್ಮ ಪ್ರಿಯತಮನ ರೂಪವನ್ನು ಕಾಣುತ್ತಾರೆ. ಆರಾಧ್ಯದೇವರನ್ನು ಕಾಣಬೇಕೆಂಬ ತೀವ್ರ ಹಂಬಲ, ಅವನೊಡನೆ ಸಾಯುಜ್ಯಗೊಳ್ಳಬೇಕೆಂಬ ತೀವ್ರ ಅಭಿಲಾಷೆ, ಹೃದಯವನ್ನು ಸುಡುತ್ತಿರುವ ವಿರಹದ ಚಿರಂತನ ದಾವಾಗ್ನಿಯ ಕಾವ್ಯಾತ್ಮಕ ಅಭಿವ್ಯಕ್ತಿ ಕ್ವಚಿತ್ತಾಗಿ ಕಂಡು ಬರುತ್ತದೆ. ಅವರ ಪದಗಳಲ್ಲಿ ಅಪಾರ ಮಾಧುರ್ಯ, ಚಿರಂತನ ಶಕ್ತಿ ಕಂಡುಬರುತ್ತದೆ.

ಅವರದು ಒಂದು ಹಂಬಲ – ವಿಶ್ವಚೈತನ್ಯಮೂರ್ತಿಯಲ್ಲಿ ವಿಲೀನವಾಗುವುದು. ಅವರ ಜೀವನ ಒಂದು ಕಾವ್ಯ. ಪರಬ್ರಹ್ಮವೇ ಚಿಂತನೆಯ ವಸ್ತು. ಅವರ ಗೀತೆಗಳಲ್ಲಿ ಪ್ರೇಮದಲ್ಲಿ ಮುಳುಗಿಸುವ ಗಾರುಡಿಯಿದೆ. ಅವರ ಪದಗಳೆಂದರೆ ಅಂತರಂಗದಲ್ಲಿ ಮಿಡಿಯುವ ಭಾವನೆಯ ದ್ಯೋತಕ. ಅವುಗಳ ಮೂಲಕಾರಣ ಭಕ್ತಿ, ದೈವದತ್ತ ಶಕ್ತಿ. ಅವುಗಳಲ್ಲಿ ಅನುಭವದ ನೆಲೆಯಿದೆ, ಕಾವ್ಯದ ಸೆಲೆಯಿದೆ, ಅವರು ಕಂಡದ್ದು ನಿತ್ಯ ಚಿರಂತನ ಸತ್ಯವಾಣಿ. ಅಮೃತವಾಣಿ – ದೇವವಾಣಿ. ಭಾವ ಭಾಷೆ ಬೆಡಗಿನವು.

## ಆಕರ ಸೂಚಿ

೧. **ಎಚ್. ಎಸ್. ಪಾರ್ವತಿ, ೨೦೦೧**

ಮೀರಾಬಾಯಿ (ಪ್ರ.ಸಂ) ಪ್ರೊ. ಎಲ್. ಎಸ್. ಶೇಷಗಿರಿರಾವ್, ಪ್ರ.: ಸಪ್ನ ಬುಕ್ ಹೌಸ್, ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ, ಬೆಂಗಳೂರು

೨. **ಗುರುಲಿಂಗ ಕಾಪಸೆ, ೧೯೯೬**

ಅಕ್ಕಮಹಾದೇವಿ, ಸಾಹಿತ್ಯ ಅಕಾಡೆಮಿ, ಪ್ರ : ಮಾ ಪ್ರಿಂಟರ್ಸ್, ಬೆಂಗಳೂರು

೩. **ಬಿ. ವೀಣಾ ಆಚಾರ್ಯ, ೧೯೯೨**

ಅಕ್ಕಮಹಾದೇವಿ ವಚನಗಳಲ್ಲಿ ಸ್ತ್ರೀ ಸಂವೇದನೆ (ಅಪ್ರಕಟಿತ ಆವೃತ್ತಿ)

# ಪರಾಮರ್ಶನ ಗ್ರಂಥಗಳು / ಲೇಖನಗಳು


೧) **ಡಾ. ತಿಪ್ಪೇಸ್ವಾಮಿ, ೨೦೦೭**

ಶರಣರು ಮತ್ತು ಸಂತರು, ಪ್ರ. : ಅಖಿಲಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು

೨) **ಎಚ್. ಎಸ್. ಪಾರ್ವತಿ, ೨೦೦೧**

ಮೀರಾಬಾಯಿ, (ಪ್ರ.ಸಂ.) ಪ್ರೊ. ಎಲ್.ಎಸ್. ಶೇಷಗಿರಿ ರಾವ್, ಪ್ರ. : ಸಪ್ನ ಬುಕ್ ಹೌಸ್, ತುಂಗಾ ಕಾಂಪ್ಲೆಕ್ಸ್, ಗಾಂಧಿನಗರ, ಬೆಂಗಳೂರು

೩) **ಡಾ. ಶೈಲಜಾ ಉಡಚಣ, ೨೦೦೭**

ವಚನ ಸಾಹಿತ್ಯ ಮತ್ತು ಮಹಿಳೆ, ಪ್ರ. : ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು

೪) **ಡಾ. ಬಿ. ಎಸ್. ಸುಮಿತ್ರಾ ಬಾಯಿ, ೨೦೦೭**

ಅಕ್ಕಮಹಾದೇವಿ, ಪ್ರ. : ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು

೫) **ಡಾ. ಪಿ. ವಿ. ನಾರಾಯಣ, ೧೯೯೭**

ವಚನ ಸಾಹಿತ್ಯ, ಪ್ರ. : ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು

೬) **ಶ್ರೀ ಜಿ. ವಿ. ಶಾಸ್ತ್ರೀ ವಿದ್ವಾನ್ ಎಂ.ಎ. ಬಿಎಡ್**

ಅಕ್ಕಮಹಾದೇವಿ: ಚರಿತ್ರೆ ಮತ್ತು ವಚನಗಳು, ಪ್ರ. : ಪಾರು ಪ್ರಕಾಶನ್, ಸ್ಟೇಶನ್ ರೋಡ, ಗದಗ

೭) **ಪಿ. ವಿ. ನಾರಾಯಣ, ೧೯೭೪**

ಕಾಯಕ ತತ್ವ, ಪ್ರ. : ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೮) **ಎಸ್. ವಿ. ಪರಮೇಶ್ವರ ಭಟ್ಟ ಎಂ. ಎ. ೧೯೫೬**

ಅಕ್ಕಮಹಾದೇವಿ, ಪ್ರ. : ಮೈಸೂರು ವಿಶ್ವವಿದ್ಯಾನಿಲಯ ಪ್ರಚಾರ ಪುಸ್ತಕ ಮಾಲೆ – ೩೨

೯) **ಪರಿಮಳ ಗುಂಜಾಳ ಬಿ. ಎ. ಗದಗ**

ರುದ್ರ ಕನ್ಯೆ ಅಕ್ಕಮಹಾದೇವಿಯ ಜೀವನ ಚರಿತ್ರೆ, ಪ್ರ : ಎಂಪಿಸ್. ಶಾಬಾದಿ ಮಠ ಬುಕ್ – ಡಿಪೊ, ಗದಗ

೧೦) **ಶ್ರೀಮತಿ ವಿಶಾಲಾಕ್ಷಿ ಕರಡ್ಡಿ, ೧೯೯೫**

ಹಿಂದಿ ಸಾಹಿತ್ಯ ಇತಿಹಾಸದಲ್ಲಿ ಭಕ್ತಿಯುಗ, ಪ್ರ : ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೧೧) **ಡಾ. (ಶ್ರೀಮತಿ) ಶಾಂತಾ ಇಮ್ರಾಪೂರ, ೨೦೦೧**

ಅಕ್ಕಮಹಾದೇವಿ (ಜೀವನ, ಸಾಹಿತ್ಯ, ವ್ಯಕ್ತಿತ್ವ–ಪ್ರಭಾವಮುದ್ರೆ) ಪ್ರ : ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳಿ, ಮೂರುಸಾವಿರ ಮಠ, ಹುಬ್ಬಳ್ಳಿ

೧೨) **ಬಸವರಾಜ ಕಲ್ಗುಡಿ, ೨೦೦೧**

ಅನುಭಾವ: ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ, ಪ್ರ : ಕರ್ನಾಟಕ ಸರ್ಕಾರ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೧೩) **ಡಾ. ಎಂ. ಎಸ್. ಕೃಷ್ಣಮೂರ್ತಿ, ೧೯೭೬**

ಹಿಂದೀ ಸಾಹಿತ್ಯ, (ಪ್ರ.ಸಂ) ಡಾ ಕೆ. ವಿ. ಪುಟ್ಟಪ್ಪ, ಪ್ರ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ

೧೪) **ಡಾ. ಕೃಷ್ಣದೇವ ಶರ್ಮ, ೧೯೭೩**

ಭಕ್ತಿಕಾಲೀನ ಕೃಷ್ಣಕಾವ್ಯ ಕಾ ಅಧ್ಯಯನ, ಪ್ರ : ರೀಗಲ್ ಬುಕ್ ಡಿಪೊ, ಡೆಲ್ಲಿ – ೬

೧೫) **ಡಾ. ಎಚ್. ತಿಪ್ಪೇರುದ್ರಸ್ವಾಮಿ, ೧೯೯೮**

ಶರಣರ ಅನುಭಾವ ಸಾಹಿತ್ಯ, ಡಿ. ವಿ. ಕೆ ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು ೪

೧೬) **ಎಸ್. ವಿನೋದಾಬಾಯಿ, ೧೯೬೯**

ಅಂಡಾಳ್ ಮಹಾದೇವಿ ಮೀರ, ಪ್ರ : ಉಷಾ ಸಾಹಿತ್ಯ ಮಾಲೆ, ಮೈಸೂರು ೧

೧೭) **ಡಾ. ಎಚ್. ತಿಪ್ಪೇರುದ್ರ ಸ್ವಾಮಿ, ೧೯೮೧**

ಕರ್ನಾಟಕ ಶರಣ ಕಥಾಮೃತ, ಡಿ.ವಿ.ಕೆ ಮೂರ್ತಿ, ಕೃಷ್ಣಮೂರ್ತಿ ಪುರಂ, ಮೇಸೂರು ೪

೧೮) ಎಂ. ಆರ್. ಶ್ರೀನಿವಾಸ ಮೂರ್ತಿ

ವಚನಧರ್ಮಸಾರ, ಪ್ರ. : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೯) ರಂ.ಶ್ರೀ ಮುಗಳಿ, ೧೯೭೮

ಕನ್ನಡ ಸಾಹಿತ್ಯ ಚರಿತ್ರೆ, ಪ್ರ. : ಉಷಾ ಸಾಹಿತ್ಯ ಮಾಲೆ, ಮೈಸೂರು – ೧

೨೦) ದೇಜಗೌ, ೧೯೯೫

ತೌಲನಿಕ ಸಾಹುತ್ಯ, ಪ್ರ. : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು

೨೧) ಗುರುಲಿಂಗ ಕಾಪಸೆ, ೧೬೬೯

ಅಕ್ಕಮಹಾದೇವಿ, ಪ್ರ. : ಸಾಹಿತ್ಯ ಅಕಾಡೆಮಿ, ಮಾ ಪ್ರಿಂಟರ್ಸ್, ಬೆಂಗಳೂರು

೨೨) ಸಂಪಾದಕ: ರಹಮತ್ ತರೀಕೆರೆ, ೨೦೦೫

ಅಕ್ಕಮಹಾದೇವಿ ವಚನಗಳು: ಸಾಂಸ್ಕೃತಿಕ ಮುಖಾಮುಖಿ

ಪ್ರ. : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೩) ಡಾ. ಎಚ್. ತಿಪ್ಪೇರುದ್ರಸ್ವಾಮಿ, ೧೬೬೨

ವಚನಗಳಲ್ಲಿ ವಿರಶೈವ ಧರ್ಮ, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು ೪

೨೪) ಡಾ. ಪ್ರಧಾನ್ ಗುರುದತ್ತ, ೧೯೯೦

ಶ್ರೀಕೃಷ್ಣ ಕಥೆಯ ಉಗಮ ಮತ್ತು ವಿಕಾಸ, ಪ್ರ. : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ

೨೫) ಬಿ. ವೀಣಾ ಆಚಾರ್ಯ, ೧೯೯೨

ಅಕ್ಕಮಹಾದೇವಿ ವಚನಗಳಲ್ಲಿ ಸ್ತ್ರೀ ಸಂವೇದನೆ (ಅಪ್ರಕಟಿತ)

೨೬) ಡಾ. ನಾಗೇಂದ್ರ, ೧೯೮೬

ಹಿಂದಿ ಸಾಹಿತ್ಯ ಕಾ ಇತಿಹಾಸ